# ಡಾ. ಸಿದ್ಧಲಿಂಗಯ್ಯ



ಮಾಧವ ಪೆರಾಜೆ



ಪ್ರಸಾರಾಂಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬

# ಡಾ. ಸಿದ್ಧಲಿಂಗಯ್ಯ

ಮಾಧವ ಪೆರಾಜೆ



ಪ್ರಸಾರಾಂಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ

Dr. Siddalingaiah : By Madhava Perage, Published by Dr.Karigowda Beechanahalli, Director, prasaranga, Kannada University, Hampi, Vidyaranya, Kamalapura 583221, PP : VIII + 28 Rs 10/-

First edition 1995.

ನಮ್ಮವರು ಪುಸ್ತಕ ಮಾಲೆ ೧೨



**ಪ್ರಕಾಶಕರು**

ಡಾ. ಕರೀಗೌಡ ಬೀಚನಹಳ್ಳಿ

ನಿರ್ದೇಶಕರು, ಪ್ರಸಾರಾಂಗ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ, ಕಮಲಾಪುರ-೫೮೩ ೨೨೧

ಬೆಲೆ : ಹತ್ತು ರೂಪಾಯಿಗಳು

**ಮುದ್ರಕರು**

ವಿನಾಯಕ ಆಫ್‌ಸೆಟ್ ಪ್ರಿಂಟರ್ಸ್

8/2, ಮಾರೇನಹಳ್ಳಿ, ಮೊದಲ ಅಡ್ಡ ರಸ್ತೆ

23ನೇ ಮುಖ್ಯ ರಸ್ತೆ, ಬೆಂಗಳೂರು - 560 078

ದೂರವಾಣಿ : 6642102

# ನಿಮ್ಮೊಡನೆ

ಹಂಪಿಯ ಕನ್ನಡ ವಿಶ್ವವಿದ್ಯಾಲಯ ವಿದ್ಯೆಯನ್ನು ಕಲಿಯಲು ಅನುವು ಮಾಡಿಕೊಡುವ ಒಂದು ಸಂಸ್ಥೆಯೇ ಹೊರತು, ಅದು ವಿದ್ಯೆಯನ್ನು ಕಲಿಸುವ ಸಂಸ್ಥೆಯಲ್ಲ. ಒಂದು ದೃಷ್ಟಿಯಿಂದ ಇದು ವಿದ್ಯೆಯನ್ನು ನಿರ್ಮಿಸುವ ಸಂಸ್ಥೆಯಾಗಿದೆ. ನಮ್ಮ ದೇಶದಲ್ಲಿ ಹಳೆಯ ಕಾಲದ ತಿಳುವಳಿಕೆಯೊಂದಿದೆ, ಅಲ್ಲದೇ ಪಶ್ಚಿಮದಿಂದ ಹರಿದು ಬರುತ್ತಿರುವ ಜ್ಞಾನಪ್ರವಾಹವೂ ಇದೆ. ಈ ಎರಡೂ ತಿಳುವಳಿಕೆಗಳು ಒಂದಕ್ಕೊಂದು ಸಂಧಿಸಿ, ಬೆಳಕನ್ನು ಉಂಟು ಮಾಡಿವೆ, ಜೊತೆಗೆ ದಿಗ್ಭ್ರಮೆಯನ್ನೂ ತಂದಿವೆ. ಈ ತಿಳುವಳಿಕೆಗಳ ವಿವೇಕದ ವಿನಿಯೋಗ ಇಂದು ಅಗತ್ಯವಾಗಿದೆ. ಇಂಥ ವಿನಿಯೋಗಕ್ಕಾಗಿ ಹೊಸಬಗೆಯ ಶಾಸ್ತ್ರ ವಿಧಾನಗಳು ನಮಗಿಂದು ಬೇಕಾಗಿವೆ. ಕನ್ನಡ ವಿಶ್ವವಿದ್ಯಾಲಯದಲ್ಲಿ ನಡೆಯುತ್ತಿರುವ ಸಂಶೋಧನೆಯ ಗುರಿಯೆಂದರೆ ಈ ಶಾಸ್ತ್ರವಿಧಾನಗಳ ನಿರ್ಮಾಣ. ಈ ಬಗೆಯ ಶಾಸ್ತ್ರ-ಕಲೆ, ಅಭಿಜಾತ - ಜಾನಪದ, ಮಾರ್ಗ-ದೇಸಿ, ಸ್ವಕೀಯ-ಪರಕೀಯ, ಪೌರ್ವಾತ್ಯ-ಪಾಶ್ಚಾತ್ಯ ಈ ಬಗೆ ದ್ವಂದ್ವಗಳ ಸಾಮರಸ್ಯ ಮತ್ತು ಸಂಘರ್ಷಗಳ ಒಡಲಿನಲ್ಲಿ ಹುಟ್ಟಿಬರುವ ತಿಳುವಳಿಕೆಯನ್ನು ಹಿಡಿದುಕೊಂಡು ಕನ್ನಡದಲ್ಲಿ ಅದಕ್ಕೆ ಅಭಿವ್ಯಕ್ತಿಯನ್ನು ಕೊಡಬೇಕಾಗಿದೆ. ಭಾಷೆಯಲ್ಲಿ ಮೂಡಿ ಬರುವ ತಿಳುವಳಿಕೆ ಮಾತ್ರ ಉಪಯುಕ್ತವಾಗಬಲ್ಲದು. ಅನುವಾದ, ಭಾಷಾಂತರ, ವಿವರಣೆ, ಟೀಕೆ, ವಿಮರ್ಶೆ ಇಂಥ ವಿಧಾನಗಳನ್ನು ಅನುಸರಿಸುತ್ತ ತಿಳುವಳಿಕೆಯ ಹೊಸ ಸಾಹಿತ್ಯ ನಿರ್ಮಾಣವಾಗಬೇಕು. ಅಂಥ ಎಲ್ಲ ಬಗೆಯ ಸಂಶೋಧನಕ್ಕೂ ಕನ್ನಡ ವಿಶ್ವವಿದ್ಯಾಲಯದಲ್ಲಿ ಅನುಕೂಲವಿದೆ, ಅವಕಾಶವೂ ಇದೆ.

ಹೀಗೆ ಮೂಡಿ ಬಂದ ಸಾಹಿತ್ಯ ಪ್ರಕಟವಾಗಬೇಕು. ನಮ್ಮ ವಿಶ್ವವಿದ್ಯಾಲಯದ ಪ್ರಸಾರಾಂಗಕ್ಕೆ ಇಂಥ ಗುರುತರವಾದ ಜವಾಬ್ದಾರಿಯಿದೆ. ವಿದ್ಯೆಯ ಸೃಷ್ಟಿಯಾಗುವುದು ಈ ಪ್ರಸಾರಾಂಗದಲ್ಲಿ. ನಾಡಿನ ತಜ್ಞರಿಂದ ಗ್ರಂಥಗಳನ್ನು ಬರೆಯಿಸಿ ಪ್ರಕಟಿಸುವುದರ ಜೊತೆಗೆ, ವಿಶ್ವವಿದ್ಯಾಲಯ ಸೃಷ್ಟಿಸುತ್ತಿರುವ ಸಾಹಿತ್ಯವನ್ನೂ ಅದು ಪ್ರಕಟಿಸಬೇಕು. ಇದು ತಿಳುವಳಿಕೆಗೆ ಪರಿಪ್ರೇಕ್ಷ್ಯವನ್ನು ಕಟ್ಟುವ ಕೆಲಸ. ನಾಡಿನ ಪ್ರಕೃತಿಯಂತೆ ನಾಡಿನ ಸಂಸ್ಕೃತಿ ಕೂಡ ಈ ಪರಿಪ್ರೇಕ್ಷ್ಯವಿಲ್ಲದೆ ತನ್ನ ಅರ್ಥವನ್ನು ಕಳೆದುಕೊಳ್ಳುತ್ತಿದೆ. ಕಲ್ಲಿನಲ್ಲಿರುವ ಶಾಸನಗಳನ್ನು ಕಣ್ಣೆತ್ತಿ ನೋಡದ ಜನ ಅದೇ ಪುಸ್ತಕದಲ್ಲಿ ಪ್ರಕಟಗೊಂಡರೆ ಓದುತ್ತಾರೆ, ಅರ್ಥ ಮಾಡಿಕೊಳ್ಳುತ್ತಾರೆ. ಜನರಾಡುವ ಶಬ್ದಗಳನ್ನೇ ಕೋಶದಲ್ಲಿ ಸಂಗ್ರಹಿಸಿದರೆ ಆ ಶಬ್ದಗಳಿಗೆ ತಿಳುವಳಿಕೆಯ ಬೆಲೆ ಬರುತ್ತದೆ.

ನಮ್ಮ ಪ್ರಸಾರಾಂಗ, ಈಗಾಗಲೇ ಕೆಲವು ಪುಸ್ತಕಗಳನ್ನು ಪ್ರಕಟಿಸಿದೆ. ಪ್ರಸಾರಾಂಗ, ತನ್ನ ಪ್ರಕಟಣೆಗಳ ಮೂಲಕ ಸಾರ್ಥಕವಾಗಬೇಕಾದ ದಾರಿಯನ್ನು ಹುಡುಕಿಕೊಳ್ಳುತ್ತಿದೆ. ಲೋಕದಲ್ಲಿಯ ತಿಳುವಳಿಕೆಯನ್ನು ಸಂಗ್ರಹಿಸಿ ತಿರುಗಿ ಲೋಕಕ್ಕೇ ದಾನ ಮಾಡುವ ಪ್ರಕ್ರಿಯೆ ಪ್ರಸಾರಾಂಗದಲ್ಲಿ ನಡೆಯುತ್ತಿದೆ. ಸಂಗ್ರಹವಾದ ತಿಳುವಳಿಕೆಗೆ ಗ್ರಂಥಗಳ ರೂಪವನ್ನು ಕೊಡುವ ಹೊಣೆಗಾರಿಕೆ ಪ್ರಸಾರಾಂಗದ್ದಾಗಿದೆ. ಈ ರೂಪಾಂತರದ ಪ್ರಕ್ರಿಯೆ ನಮ್ಮ ವಿಶ್ವವಿದ್ಯಾಲಯದ ವೈಶಿಷ್ಟ್ಯವಾಗಿದೆ.

ನಾವು ನಮ್ಮ ನಮ್ಮಲ್ಲಿ ವಿಚಾರ ವಿನಿಮಯ ನಡೆಸಲು, ಒಬ್ಬರ ಅರಿವನ್ನು ಎಲ್ಲರೂ ಹಂಚಿಕೊಳ್ಳಲು, ವಿಶ್ವವಿದ್ಯಾಲಯದಲ್ಲಿ ಪ್ರತಿವಾರ ಮಂಟಪವೆಂಬ ಕಾರ್ಯಕ್ರಮ ನಡೆಸುತ್ತೇವೆ. ಅಲ್ಲಿ ಹೊಮ್ಮಿದ ವಿಚಾರಗಳು ನಮ್ಮ ಅರಿವನ್ನು ಹೆಚ್ಚಿಸಿದಂತೆ ನಿಮಗೂ ಲಾಭದಾಯಕವಾಗುವವೆಂಬ ನಂಬಿಕೆಯಿಂದ ಅವನ್ನು ಕಿರುಪುಸ್ತಿಕೆಗಳ ರೂಪದಲ್ಲಿ ನಿಮ್ಮ ಕೈಗಿಡುತ್ತಿದ್ದೇವೆ.

**ಡಾ. ಚಂದ್ರಶೇಖರ ಕಂಬಾರ**

*ಕುಲಪತಿಗಳು*

**ಪರಿವಿಡಿ**

# ಡಾ. ಸಿದ್ಧಲಿಂಗಯ್ಯ

''ಕೇರಿಯಲ್ಲಿ ಕೊನೆಯ ಮನೆ ನಮ್ಮದು. ನಮ್ಮ ಮನೆಗೂ ಕೊನೆಯಲ್ಲಿ ಇನ್ನೊಂದು ಮನೆ ಇತ್ತೇನೊ? ಅದರ ಛಾವಣಿ ಕುಸಿದು ಮೂರು ನಾಲ್ಕು ಅಡಿ ಎತ್ತರದ ಮಣ್ಣಿನ ಗೋಡೆ ಮಾತ್ರ ಉಳಿದಿತ್ತು. ನಾನಲ್ಲದೆ ಬೇರೆ ಮನೆಗಳ ಹುಡುಗರು ಆ ಮೋಟು ಗೋಡೆಯ ಮೇಲೆ ನಿಂತು ದೂರಕ್ಕೆ ಕಣ್ಣು ಹಾಯಿಸಿ ಕೆಲಸಕ್ಕೆ ಹೋಗಿರುವ ಅಪ್ಪ ಅವ್ವರನ್ನು ಹುಡುಕುತ್ತಿದ್ದವು. ಮನೆಗೆ ಬೇಗ ಬರಬೇಕೆಂದು ಕೆಲವು ಸಲ ಹೆತ್ತವರಿಗೆ ಕೂಗಿ ಹೇಳುತ್ತಿದ್ದೆವು. ಆ ಕೂಗು ಅವರಿಗೆ ಕೇಳಿಸುತ್ತಿತ್ತೋ ಇಲ್ಲವೋ ನಾವು ಅವರಿಗೆ ಕಾಣಿಸುತ್ತಿದ್ದೆವೋ ಇಲ್ಲವೋ ಅದು ನಮಗೆ ಗೊತ್ತಿರಲಿಲ್ಲ. ಈ ಮೋಟು ಗೋಡೆಗೆ ಐನೂರು ಆರುನೂರು ಅಡಿ ಅಂತರದಿಂದ ಐನೋರ ಜಮೀನು ಪ್ರಾರಂಭವಾಗುತ್ತಿತ್ತು. ಆ ಜಮೀನಿನಲ್ಲಿ ಐನೋರ ಚಂದವಾದ ಮನೆ, ದೊಡ್ಡದಾದ ಪಂಪ್‌ಸೆಟ್ ಬಾವಿ ಇದ್ದವು. ಆ ಬಾವಿಯಿಂದ ಅವರ ಹೊಲಗದ್ದೆಗಳಿಗೆ ನೀರು ಹರಿಯುತ್ತಿತ್ತು. ನಮ್ಮ ಕೇರಿಯ ಜನಕ್ಕೆ ಕುಡಿಯಲು ನೀರು ಸಿಕ್ಕರೆ ಅದೇ ದೊಡ್ಡ ಸಂಗತಿ. ನಮ್ಮ ಜನ ಸ್ವಲ್ಪ ದೂರದಲ್ಲಿದ್ದ ಹೂವಿನ ತೋಟದ ಪಕ್ಕದ ಬಾವಿಯಿಂದ ನೀರು ತರುತ್ತಿದ್ದರು.

ಎಂದಿನಂತೆ ಹುಡುಗರೆಲ್ಲ ನಮ್ಮ ಪಕ್ಕದ ಮನೆಯ ಮೋಟುಗೋಡೆಯ ಮೇಲೆ ನಿಂತು ಅಪ್ಪ ಅವ್ವಂದಿರನ್ನು ಕೂಗುತ್ತಿದ್ದಾಗ ಒಂದು ನೋಟ ಕಾಣಿಸಿತು. ಐನೋರ ಹೊಲದಲ್ಲಿ ಇಬ್ಬರು ಮನುಷ್ಯರ ಹೆಗಲ ಮೇಲೆ ನೊಗ ಹೂಡಿ ಮತ್ತೊಬ್ಬ ಗದ್ದೆ ಉಳುತ್ತಿದ್ದನು. ನೊಗ ಹೊತ್ತ ಆ ಇಬ್ಬರು ಮನುಷ್ಯರು ಎತ್ತುಗಳಂತೆ ಮುಂದೆ ಹೋಗುತ್ತಿದ್ದರೆ ಮೂರನೆಯವನು ಹಿಂದಿನಿಂದ ಚಾಟಿ ಬಾರಿಸುತ್ತ ಉಳುಮೆ ಮಾಡುತ್ತಿದ್ದ ದೃಶ್ಯ ಮೋಜಿನಂತೆ ಕಾಣುತ್ತಿತ್ತು. ಆದರೆ ನೊಗ ಹೊತ್ತಿದ್ದ ಇಬ್ಬರು ವ್ಯಕ್ತಿಗಳಲ್ಲಿ ಒಬ್ಬ ನನ್ನ ಅಪ್ಪ ಎಂದು ಗೊತ್ತಾದ ಕ್ಷಣದಿಂದ ನನ್ನಲ್ಲಿ ವಿಚಿತ್ರವಾದ ಸಂಕಟ ಶುರುವಾಯಿತು. ಹುಡುಗರಿದ್ದ ಜಾಗಕ್ಕೆ ಬಂದ ಕೆಲವು ಹೆಂಗಸರು 'ಪಾಪ ದ್ಯಾವಣ್ಣನಿಗೆ ಎಂಥ ಕಷ್ಟ ಬಂತು' ಎಂದದ್ದು ನನ್ನ ಕಿವಿಗೆ ಬಿದ್ದು ಮನಸ್ಸಿನ ನೋವು ಇಮ್ಮಡಿಯಾಯಿತು. ಗದ್ದೆಯಲ್ಲಿ ಎತ್ತಾಗಿ ದುಡಿದ ಅಪ್ಪ ಸಂಜೆ ಮನೆಗೆ ಬಂದಾಗ ಅವ್ವ ಅವನ ಭುಜಕ್ಕೆ ಎಣ್ಣೆ ಕಾಯಿಸಿ ಹಚ್ಚುತ್ತಿದ್ದಳು'' (ಬಾಲ್ಯಕಾಲ - ರುಜುವಾತು)

ಕವಿ ಸಿದ್ಧಲಿಂಗಯ್ಯನವರ ಈ ಬಾಲ್ಯ ಕಾಲದ ನಿರೂಪಣೆ ಇಪ್ಪತ್ತನೇ ಶತಮಾನದ ಉತ್ತರಾರ್ಧದಲ್ಲೂ ಉಳಿದುಕೊಂಡಿದ್ದ ಭೀಕರ ವರ್ಗ ತಾರತಮ್ಯವನ್ನೂ ಶೋಷಣೆಯನ್ನೂ ನಮ್ಮ ಮುಂದೆ ತೆರೆದಿಡುತ್ತದೆ.

ಇಂಥ ಕಿತ್ತು ತಿನ್ನುವ ಬಡತನದಲ್ಲಿ ನೀಸುತ್ತಿದ್ದ ಸಿದ್ಧಲಿಂಗಯ್ಯನವರ ತಂದೆ ದೇವಯ್ಯ ಬೆಂಗಳೂರು ಪಕ್ಕದ ಮಾಗಡಿಯವರು. ಮುಂದೆ ಇದೇ ಬಡತನವನ್ನು ನೀಸಲಾರದೆ ಬೆಂಗಳೂರಿನ ಗಿರಣಿಯೊಂದರಲ್ಲಿ ಉದ್ಯೋಗ ಅರಸಿ ತಂದೆಯವರು ಹೊರಟಾಗ ತಾತ್ಕಾಲಿಕವಾಗಿ ಸಿದ್ಧಲಿಂಗಯ್ಯ ಮತ್ತು ಅವರ ಅವ್ವ ಅಜ್ಜಿಯ ಊರಾದ ಮಂಚನಬೆಲೆಗೆ ಸೇರಬೇಕಾಯಿತು. ಮಂಚನಬೆಲೆಯಲ್ಲಿಯೇ ಪ್ರಾಥಮಿಕ ವಿದ್ಯಾಭ್ಯಾಸಕ್ಕೆ ಸೇರಿಕೊಂಡ ಇವರು ತಾಯಿ ವೆಂಕಟಮ್ಮನವರ ಪ್ರಕಾರ ಗೌರಿ ಹುಣ್ಣಿಮೆಗೆ ಹದಿನೈದು ದಿನ ಮುನ್ನ ಹುಟ್ಟಿದವರು. ಶಾಲೆ ದಾಖಲಾತಿ ಪ್ರಕಾರ ಇವರು ಹುಟ್ಟಿದ ದಿನಾಂಕ ೩-೨-೧೯೫೪! ಇದು ಅಕ್ಷರದಿಂದ ವಂಚಿತರಾದ ಎಲ್ಲ ಜನ ಸಮೂದಾಯಕ್ಕೂ ಇರುವ ಗೊಂದಲ.

ಹೀಗೆ ಶಿಕ್ಷಣಕ್ಕಾಗಿ ಅಜ್ಜಿ ಊರಲ್ಲೇ ಉಳಿದ ಇವರು ಬಳಿಕ ತಂದೆಯಿದ್ದ ಬೆಂಗಳೂರು ನಗರಕ್ಕೇ ಬಂದರು. ಹಾಗಾಗಿ ಬೆಂಗಳೂರಲ್ಲಿಯೂ ಬಾಕಿ ಉಳಿದ ಪ್ರಾಥಮಿಕ ಶಿಕ್ಷಣವನ್ನು ಮುಗಿಸಿದ ಇವರಿಗೆ ಮುಂದೆ ಅಲ್ಲಿಯ ಮಲ್ಲೇಶ್ವರಂ ಸರಕಾರಿ ಪ್ರೌಢಶಾಲೆಯಲ್ಲಿಯೇ ಪ್ರೌಢಶಾಲಾ ಶಿಕ್ಷಣವಾಯಿತು.

ಪ್ರೌಢಶಾಲೆಯಲ್ಲಿರುವಾಗಲೇ ಇವರು ಕವನ ಬರೆಯುತ್ತಿದ್ದುದೊಂದು ವಿಶೇಷ. ಈ ರೀತಿಯ ತನ್ನ ಸಹಜ ಕವಿ ಪ್ರತಿಭೆಗೆ ಪೂರಕವಾಗಿ ಯಾವುದೇ ಕೌಟುಂಬಿಕ ಹಿನ್ನೆಲೆಯಿರಲಿಲ್ಲ. ಹಾಗೆ ನೋಡಿದರೆ ಪ್ರಾಥಮಿಕ ಶಾಲಾ ಹುಡುಗನಾಗಿದ್ದಾಗಲೇ ಕವನ ಬರೆಯುತ್ತಿದ್ದ ಈ ಹುಡುಗನಿಗೆ ಹೈಸ್ಕೂಲಿನಲ್ಲಿ ಇನ್ನೂ ಹೆಚ್ಚಿನ ಪ್ರೋತ್ಸಾಹ ದೊರೆಯಿತು. ಹೈಸ್ಕೂಲಿನಲ್ಲಿ ಓದುತ್ತಿದ್ದಾಗ ವಸತಿ ನಿಲಯದಲ್ಲಿ ಸರಿಯಾದ ಊಟ ವಸತಿಯ ವ್ಯವಸ್ಥೆಯಿಲ್ಲದಿದ್ದುದೇ ಈ ರೀತಿಯ ಕವನಗಳಿಗೆ ಪ್ರೇರಣೆಯಾಗಿತ್ತು. ಕವನದ ಮೂಲಕ ಸಂಬಂಧ ಪಟ್ಟವರನ್ನು ತರಾಟೆಗೆ ತೆಗೆದುಕೊಳ್ಳುವ ರೀತಿಯ ಕವನಗಳನ್ನು ಈ ಹುಡುಗ ಬರೆದರೆ, ಬರೆದ ಹಾಡುಗಳನ್ನು ಇತರ ಹುಡುಗರು ಒಕ್ಕೊರಲಿನಿಂದ ಹಾಡುತ್ತಿದ್ದರು. ಹಾಗಾದುದರಿಂದ ಹೈಸ್ಕೂಲು ಹಂತದಲ್ಲಿಯೇ ಹುಡುಗನಿಗೆ 'ಗುರುತಿಸುವ' ಹೆಸರಿತ್ತು. ತನ್ನನ್ನು ಆಗ ಕವಿಯೆಂದೇ ಅಧ್ಯಾಪಕರು ಕರೆಯುತ್ತಿದ್ದರೆಂದು ಈಗ ಸಿದ್ಧಲಿಂಗಯ್ಯ ನೆನಪು ಮಾಡಿಕೊಳ್ಳುತ್ತಾರೆ.

ಪ್ರೌಢಶಾಲಾ ವಿದ್ಯಾರ್ಥಿಯಾಗಿದ್ದಾಗಲೇ ಸಿದ್ಧಲಿಂಗಯ್ಯನವರ ಜೀವನದಲ್ಲಿ ನಡೆದ ಕೆಲವು ಉಲ್ಲೇಖನೀಯ ಘಟನೆಗಳನ್ನು ಇಲ್ಲಿಯೇ ಸ್ಮರಿಸಬಹುದು. ಆಗಿನ್ನೂ ಎಳೆಯ ವಯಸ್ಸಾಗಿದ್ದರೂ ಹಾಡು ಬರೆಯುವ, ಸಿಡಿದೇಳುವ ಪ್ರವೃತ್ತಿಯಿಂದ ಇವರು ಸುತ್ತಮುತ್ತ ಒಂದಷ್ಟು ಮಂದಿಗೆ ಪರಿಚಿತರಾಗಿದ್ದರು. ಈ ಕಾರಣದಿಂದಲೇ ಅಂಬೇಡ್ಕರ್, ಅವರ ಮಗ ಯಶವಂತರಾವ್ ಅಂಬೇಡ್ಕರ್ ಅವರ 'ರಿಪಬ್ಲಿಕ್ ಪಾರ್ಟಿ'ಯೊಂದಿಗೆ ಸಂಪರ್ಕ ಬೆಳೆಯಿತು. ಅದೇ ಸಮಯಕ್ಕೆ ಶಾಂತವೇರಿ ಗೋಪಾಲಗೌಡರಂತಹ ಧೀಮಂತ ನಾಯಕರ ಪರಿಚಯವೂ ಆಯಿತು. ಈ ಇಬ್ಬರು ಗಣ್ಯವ್ಯಕ್ತಿಗಳೊಂದಿಗೆ ತೀರಾ ಎಳವೆಯಲ್ಲಿಯೇ ಒಂದೇ ವೇದಿಕೆಯಲ್ಲಿ ತೊಡಗಿಸಿಕೊಂಡ

ಅನುಭವ ಸಿದ್ಧಲಿಂಗಯ್ಯನವರಿಗಿದೆ. ಹೀಗೆ ಆರಂಭದಲ್ಲೇ ಅಂಬೇಡ್ಕರ್ ಚಿಂತನೆ ಮತ್ತು ಲೋಹಿಯಾ ವಾದಗಳು ಸಿದ್ಧಲಿಂಗಯ್ಯನವರನ್ನು ಪ್ರಭಾವಿಸಿದವು.

ಈ ಮಧ್ಯೆ ಆಗಿನ ದಲಿತ ಮುಂದಾಳು ಬಿ. ಬಸವಲಿಂಗಪ್ಪನವರ 'ಬೂಸಾ ಚಳುವಳಿ' ಸುದ್ದಿಯಾಯಿತು. ಸಿದ್ಧಲಿಂಗಯ್ಯ ಬಿ.ಎ. ಆನರ್ಸ್ ಓದುತ್ತಿದ್ದ ಕಾಲವದು. ಆಗ ಅವರಿಗೆ ಬಸವಲಿಂಗಪ್ಪನವರ ಬಗೆಗೆ ಅಂತಹ ಒಲವೇನೂ ಇರಲಿಲ್ಲ. ಆದರೆ ಬಸವಲಿಂಗಪ್ಪ ಗಾಂಧಿಯನ್ನು ನಿಂದಿಸಿದ್ದು, ಕನ್ನಡ ಸಾಹಿತ್ಯ ಪರಂಪರೆಯನ್ನು ತೀವ್ರವಾಗಿ ತರಾಟೆಗೆ ತೆಗೆದುಕೊಂಡಿದ್ದು ಮೊದಲಾದ ವಿಷಯಗಳನ್ನು ಕುರಿತಂತೆ ಸನಾತನಿ ವಿದ್ಯಾರ್ಥಿಗಳು ಅಸಭ್ಯವಾಗಿ ನುಡಿಯುತ್ತಿದ್ದುದು ಇವರಿಗೆ ಇಷ್ಟವಾಗಲಿಲ್ಲ. ಮುಂದೆ ಬಸವಲಿಂಗಪ್ಪನವರ ವಿರುದ್ಧ ಪಟ್ಟಭದ್ರರು ಚಳುವಳಿಯನ್ನೇ ಆರಂಭಿಸಿದಾಗ ಸಿದ್ಧಲಿಂಗಯ್ಯನವರು 'ಬಸವಲಿಂಗಪ್ಪನವರ ಪರ'ವಾದ ಚಳುವಳಿಯ ನಾಯಕರಾದರು. ಈ ಬಗೆಗೆ ಸಿದ್ಧಲಿಂಗಯ್ಯನವರು ನೆನಪಿಸಿಕೊಳ್ಳುವಂತೆ ವಿದ್ಯಾರ್ಥಿಯೊಬ್ಬ ತನ್ನ ಪರವಾಗಿ ಚಳುವಳಿಗೆ ಧುಮುಕಿರುವುದನ್ನು ತಿಳಿದು ಆ ಅಪರಿಚಿತನನ್ನು ಕರೆತರುವಂತೆ ಕಾರನ್ನು ಕಳುಹಿಸಿ ಬರಮಾಡಿಕೊಂಡರು. ಹೀಗೆ ಬಸವಲಿಂಗಪ್ಪನವರೊಂದಿಗೆ ಮೈತ್ರಿ ಬೆಳೆಯಿತಾದರೂ ಮುಂದೆ ಅವರು 'ಬಂಡವಾಳಶಾಹಿ ದಲಿತ'ನೆಂದು ತಿಳಿದು ಬಂದಾಗ ಅಂದರೆ ೧೯೭೫ ರ ವೇಳೆಗೆ ಅವರಿಂದ ದೂರವಾದೆ ಎಂದು ಸಿದ್ಧಲಿಂಗಯ್ಯ ತಿಳಿಸುತ್ತಾರೆ.

೧೯೭೩ರಲ್ಲಿ ನಡೆದ ಮತ್ತೊಂದು ಘಟನೆ ಇಲ್ಲಿ ಉಲ್ಲೇಖನೀಯ. ತಮ್ಮ ಪ್ರಖರವಾದ ವಿಚಾರವಾದದಿಂದಾಗಿ ಸಹಜವಾಗಿಯೇ ಅವರು ಅಂದಿನ ಅಖಿಲ ಕರ್ನಾಟಕ ವಿಚಾರವಾದಿ ವಿದ್ಯಾರ್ಥಿ ಸಮ್ಮೇಳನದ ಅಧ್ಯಕ್ಷರಾಗಿದ್ದರು. ಅಂದಿನ ಸಭೆಯ ಪುಟ್ಟ ವರದಿಯೊಂದನ್ನು ತಮ್ಮ ಕೃತಿ 'ಅವತಾರಗಳು' ಕೃತಿಯಲ್ಲಿ ಸಿದ್ಧಲಿಂಗಯ್ಯ ಈಗಾಗಲೇ ದಾಖಲಿಸಿರುವುದರಿಂದ ಮುಂದಿನ ಮಾತುಗಳನ್ನು ಅವರ ಬಾಯಿಯಿಂದಲೇ ಕೇಳೋಣ.:

''....... ಬೆಂಗಳೂರಿಗೆ ಪೆರಿಯಾರ್ ರಾಮಸ್ವಾಮಿ ಅಯ್ಯರ್ ಅವರನ್ನು ಕರೆಸಿದ್ದಾಗ, ಕಾರ್ಯಕ್ರಮದಲ್ಲಿ ನಾನೂ ಒಬ್ಬ. ಪೆರಿಯಾರರ ಭಾಷಣದ ಆರಂಭದ ಮಾತುಗಳಿಂದ ನನಗೆ ರೋಮಾಂಚನವಾಯಿತು. ಅವಿನ್ನೂ ನೆನಪಿವೆ.

ದೇವರಿಲ್ಲ ದೇವರಿಲ್ಲ
ದೇವರಿಲ್ಲವೇ ಇಲ್ಲ.
ದೇವರನ್ನು ಸೃಷ್ಟಿಸಿದವನು
ಮುಠ್ಠಾಳ.
ದೇವರನ್ನು ಪ್ರಚಾರ ಮಾಡುವವನು
ಅಯೋಗ್ಯ.
ದೇವರಿಗೆ ನಮಸ್ಕರಿಸುವವನು
ಕಾಡುಮೃಗ.

ತನ್ನ ಜೀವನವನ್ನೇ ನಾಸ್ತಿಕವಾದದ ಪ್ರಸಾರಕ್ಕೆ ಮುಡುಪಿಟ್ಟ ಈ ಮನುಷ್ಯನನ್ನು ನೋಡಿದ್ದು, ಭಾಷಣ ಕೇಳಿದ್ದು ನನಗೆ ಖುಷಿ ತಂದಿತು. ನನ್ನನ್ನು ಪೆರಿಯಾರ್‌ಗೆ ಪರಿಚಯ ಮಾಡಿಕೊಟ್ಟಾಗ ಅವರ ಅನಾರೋಗ್ಯ ನನ್ನಲ್ಲಿ ಕನಿಕರವನ್ನು ತಂದಿತ್ತು.

ಆ ದಿನ ಸಂಜೆ ಯಾದವ ಸಂಘ ವಿದ್ಯಾರ್ಥಿನಿಲಯದಲ್ಲಿ ಪೆರಿಯಾರ್ ಮತ್ತು ಇತರ ವಿಚಾರವಾದಿ ' ಹಿರಿಯರು ಗಂಭೀರ ಚರ್ಚೆಯಲ್ಲಿ ತೊಡಗಿದ್ದರು. ಬೋರಾಗಿ ನಾನು ಮತ್ತು ಅಗ್ರಹಾರ ಕೃಷ್ಣಮೂರ್ತಿ ಹೊರಗೆ ಬಂದೆವು. ಹೊರಗಿನ ಪಾರ್ಕಿನಲ್ಲಿ ಕಾಯುತ್ತಿದ್ದ ಸುಮಾರು ಅರವತ್ತು ಜನ ನಮ್ಮ ಮೇಲೆ ಎಗರಿ ಬಿದ್ದರು. ಒಳಗಿದ್ದವರು ನಮ್ಮ ಚೀರಾಟ ಕೇಳಿ ಬರದಿದ್ದರೆ ನಮ್ಮ ಕತೆ ಮುಗಿದು ಹೋಗುತ್ತಿತ್ತು. ನನ್ನ ಮತ್ತು ಕೃಷ್ಣಮೂರ್ತಿಯ ಬಟ್ಟೆಗಳು ರಕ್ತಸಿಕ್ತವಾಗಿದ್ದವು. ನಾವಿಬ್ಬರೂ ಏಟು ತಿಂದು ಬಿದ್ದಿದ್ದೆವು. ಅಷ್ಟರಲ್ಲಿ ಹೊಡೆದವರು ಓಡಿಹೋಗಿ ನಾವೇ ಅವರಿಗೆ ಹೊಡೆದಂತೆ ದೂರು ಕೊಟ್ಟರು. ಹೀಗಾಗಿ ಪೋಲೀಸರಿಂದಲೂ ನಮಗೆ ಹೊಡೆತ ಬಿತ್ತು. ನಾಸ್ತಿಕವಾದದ ನಿಷ್ಠಾವಂತ ಅನುಯಾಯಿಯಾಗಿ ಕಾಲೇಜಿಗೆ ಎರಡು ತಿಂಗಳು ಸರಿಯಾಗಿ ನಡೆಯಲಾಗದೆ ಕುಂಟುತ್ತ ಹೋದೆ. ಅಂದಿನಿಂದ ದೇವರುಗಳಿಗಿಂತ ರೌಡಿಗಳದೇ ನನಗೆ ಭಯ!''

ಹಾಗೆಯೇ ೧೯೭೪ರ ಘಟನೆಯೊಂದನ್ನು ಇಲ್ಲಿ ನೆನಪಿಸುವುದು ಸೂಕ್ತ. ಸಿದ್ಧಲಿಂಗಯ್ಯ ಆಗ ಓದುತ್ತಿದ್ದ ಅಂದಿನ ಸರಕಾರಿ ಕಾಲೇಜಿನ ವಿದ್ಯಾರ್ಥಿ ಸಂಘದ ಕಾರ್ಯದರ್ಶಿಯಾಗಿ ಆಯ್ಕೆಯಾದರು. ದಲಿತ ವಿದ್ಯಾರ್ಥಿಯೊಬ್ಬ ಈ ರೀತಿ ಆಯ್ಕೆಯಾಗುತ್ತಾನೆ ಎಂಬುದು ಸವರ್ಣೀಯರಿಗೆ ಅನಿರೀಕ್ಷಿತವಾಗಿತ್ತು. ಅದು ಮೊತ್ತ ಮೊದಲ ಬಾರಿಗೆ ಇಡೀ ಬೆಂಗಳೂರು ಕಾಲೇಜುಗಳ ಇತಿಹಾಸದಲ್ಲಿ ದಲಿತ ವಿದ್ಯಾರ್ಥಿಯೊಬ್ಬನಿಗೆ ಸಿಕ್ಕ ಜಯವಾಗಿತ್ತು. ಅದಲ್ಲದೆ ಈ ಕಾಲೇಜು ಬೆಂಗಳೂರಿನ ರಾಜಕೀಯ ವಿದ್ಯಮಾನಗಳನ್ನು ಹೆಚ್ಚು ಕಡಿಮೆ ನಿರ್ವಹಿಸುತ್ತಿದ್ದ ಪ್ರಭಾವಿ ಸಂಸ್ಥೆಯಾಗಿದ್ದುದರಿಂದ ಇವರ ಗೆಲುವು ಅಸಾಧಾರಣವಾಗಿತ್ತೆಂದೇ ಹೇಳಬೇಕು. ಆದರೆ ಈ ಘಟನೆ ಅಷ್ಟೇ ವಿಚಿತ್ರವಾದ ತಿರುವೊಂದನ್ನು ಪಡೆಯಿತು. ಸಿದ್ಧಲಿಂಗಯ್ಯ ಓರ್ವ 'ನಾಸ್ತಿಕ'ನೆಂದು ನಿಧಾನವಾಗಿ ಮನವರಿಕೆ ಮಾಡಿಕೊಂಡ ಪಟ್ಟಭದ್ರರು, ಆ ಏಕೈಕ ಕಾರಣವನ್ನು ಮುಂದು ಮಾಡಿಯೇ, ಅವರಿಂದ ಕಾರ್ಯದರ್ಶಿ ಸ್ಥಾನಕ್ಕೆ ಬಲಾತ್ಕಾರವಾಗಿ ರಾಜೀನಾಮೆ ಬರೆಸಿಕೊಂಡರು.

ಈಗಾಗಲೇ ಹೇಳಿರುವಂತೆ ೧೯೭೪-೭೫ ರ ಕಾಲಕ್ಕೆ ಕಾಲೇಜು ವಿದ್ಯಾರ್ಥಿಯಾಗಿದ್ದ ಸಿದ್ಧಲಿಂಗಯ್ಯ ಅಲ್ಲಿಯವರೆಗೆ ಅಂಬೇಡ್ಕರ್‌ವಾದಿಯಾಗಿದ್ದವರು ನಿಧಾನವಾಗಿ ಮಾರ್ಕ್ಸ್‌ವಾದಿ ವಿಚಾರಧಾರೆಗಳಿಂದಲೂ ಪ್ರಚೋದಿತರಾದರು. ಈ ಕಾರಣದಿಂದಲೇ ೧೯೭೫ ರಲ್ಲಿ ' ದಲಿತ ಸಂಘರ್ಷ ಸಮಿತಿ'ಯನ್ನು ಮಾರ್ಕ್ಸ್‌ವಾದಿ ಹಿನ್ನೆಲೆಯಲ್ಲಿ ಹುಟ್ಟು ಹಾಕಿದ ಕಾರಣಪುರುಷರಲ್ಲಿ ಸಿದ್ಧಲಿಂಗಯ್ಯನವರೂ ಒಬ್ಬರು.

ಆಗಿನ ದಲಿತ ಸಂಘರ್ಷ ಸಮಿತಿಯಲ್ಲಿ ಸಿದ್ಧಲಿಂಗಯ್ಯ, ದೇವನೂರು ಮಹಾದೇವ ಮತ್ತು ಬಿ. ಕೃಷ್ಣಪ್ಪ ಬಹು ಪ್ರಮುಖರು. ಹೀಗೆ ದಲಿತ ಸಂಘರ್ಷ ಸಮಿತಿಯಲ್ಲಿ

ಕ್ರಿಯಾಶೀಲವಾಗಿ ತೊಡಗಿಸಿಕೊಂಡಿದ್ದ ಸಿದ್ಧಲಿಂಗಯ್ಯ ಹೋರಾಟಗಳಲ್ಲಿ ಪಾಲ್ಗೊಂಡು ಪೋಲೀಸರಿಂದ ಮತ್ತು ವಿರೋಧಿಗಳಿಂದ ಏಟು ತಿಂದವರು. ಅಂದರೆ 'ದಲಿತ ಸಂಘರ್ಷ ಸಮಿತಿ'ಯಂತಹ ಹೋರಾಟ ಮೂಲವಾದ ಸಂಘಟನೆಯೊಂದರಲ್ಲಿ ತೊಡಗಿಸಿ ಕೊಳ್ಳಬೇಕಾದರೆ ಇರಲೇಬೇಕಾದ (ಪೋಲೀಸರಿಂದ ಮತ್ತು ಸವರ್ಣೀಯರಿಂದ ಏಟು ತಿನ್ನುವ)ಅತ್ಯುತ್ತಮ ಅರ್ಹತೆ ಸಿದ್ಧಲಿಂಗಯ್ಯನವರಿಗಿದೆ ಎಂಬುದನ್ನು ಇಲ್ಲಿ ನೆನಪಿಸಿ ಕೊಳ್ಳುವ ಸಲುವಾಗಿ ಈ ಮಾತುಗಳನ್ನು ಹೇಳಲೇ ಬೇಕಾಯಿತು. ಏಕೆಂದರೆ ನಮ್ಮಲ್ಲಿ 'ಚಳುವಳಿ'ಎಂದರೆ ಪದ್ಯ ಬರೆಯುವುದು ಮತ್ತು ಅದನ್ನು ವಿಮರ್ಶಿಸುವುದಷ್ಟೇ ಜವಾಬ್ದಾರಿ ಎಂದು ತಿಳಿದವರೇ ಹೆಚ್ಚು!

ಹೀಗೆ ಬಾಲ್ಯದಿಂದಲೇ ಹತ್ತು ಹಲವು ಕಾರ್ಯಕ್ಷೇತ್ರಗಳಲ್ಲಿ ತೊಡಗಿಸಿಕೊಂಡಿದ್ದ ಸಿದ್ಧಲಿಂಗಯ್ಯ ಸಹಜವಾಗಿಯೇ ಹಲವು ವಿಚಾರಧಾರೆಗಳಿಂದ ಪ್ರಭಾವಿತರಾದರು. ಬಸವಲಿಂಗಪ್ಪ, ಗಾಂಧಿ, ಅಂಬೇಡ್ಕರ್, ಪೆರಿಯಾರ್, ವಸುದೇವ ಭೂಪಾಲಂ, ಮಾರ್ಕ್ಸ್ ಮೊದಲಾದವರ ವಿಚಾರಧಾರೆಗಳಿಂದ ಪ್ರಭಾವಿತರಾಗಿದ್ದ ಅವರು 'ನಾನೀಗ Humanist (ಮಾನವತಾವಾದಿ)ದೃಷ್ಟಿಕೋನಗಳತ್ತ ವಾಲುತ್ತಿದ್ದೇನೆ' ಎನ್ನುತ್ತಾರೆ.

ಸಿದ್ಧಲಿಂಗಯ್ಯನವರ ಜೀವನದ ಬಗೆಗೆ ಹೇಳುತ್ತ ಆರಂಭದಲ್ಲಿ ಸಾಹಿತ್ಯದ ಕುರಿತು ಪ್ರಾಸಂಗಿಕವಾಗಿ ಹೇಳಿದೆ. ಹೋರಾಟ ಜೀವಿಯಾಗಿದ್ದ ಅವರ ಬಗೆಗೆ ಹೇಳುತ್ತಿದ್ದಾಗ ತಪ್ಪಿಸಿಕೊಂಡ ಸಾಹಿತ್ಯ ಭಾಗದ ಕುರಿತು ಇಲ್ಲೀಗ ಪ್ರಸ್ತಾಪಿಸಬಹುದು.

ಸಿದ್ಧಲಿಂಗಯ್ಯನವರು ಪ್ರಾಥಮಿಕ ಶಾಲೆಯ ವಿದ್ಯಾರ್ಥಿಯಾಗಿದ್ದಾಗಲೇ ಕವನ ಬರೆಯುತ್ತಿದ್ದರೆಂಬುದನ್ನು ನೆನಪಿಸಿಕೊಂಡು ಇದೀಗ ಮುಂದುವರಿಯಬೇಕು. ಅವು ಒಂದು ರೀತಿಯ 'ಶಿಶುಗೀತೆಗಳು' ಎಂಬುದಾಗಿ ಆ ಗೀತೆಗಳ ಬಗೆಗೆ ಈಗ ಅವರು'ವಿಮರ್ಶಿ'ಸುತ್ತಾರೆ. ಹೈಸ್ಕೂಲು ವಿದ್ಯಾರ್ಥಿಯಾಗಿದ್ದಾಗ ಅಲ್ಲಿಯ ವ್ಯವಸ್ಥೆಯನ್ನು ಹಾಡಿನ ಮೂಲಕ ಪ್ರತಿಭಟಿಸುತ್ತಿದ್ದ ಸಿದ್ಧಲಿಂಗಯ್ಯ ಆಗ ಕೊಳೆಗೇರಿಯ ನಿವಾಸಿಯಾಗಿದ್ದರು.

ಸಾಮಾನ್ಯವಾಗಿ ಸಿದ್ಧಲಿಂಗಯ್ಯನವರ ಕವನಗಳೆಂದರೆ 'ದಲಿತ ಸಂಘರ್ಷ ಸಮಿತಿ'ಯ ಸ್ವಭಾವವನ್ನು ಗುರುತಿಸಲಾಗುತ್ತದೆ. ಆದರೆ ಹುಟ್ಟು ಹೋರಾಟಗಾರರಾದ ಇವರು ಈ ದಲಿತ 'ಸಮಿತಿ'ಯು ಅಸ್ತಿತ್ವಕ್ಕೆ ಬರುವುದಕ್ಕೆ ಮೊದಲೇ 'ಹೋರಾಟ'ದ ಹಾಡುಗಳನ್ನು ಸಹಜವಾಗಿ ಬರೆದಿದ್ದರು. (ಇದಕ್ಕೆ ' ಹೊಲೆಮಾದಿಗರ ಹಾಡು' ಕವನ ಸಂಕಲನವೇ ಸಾಕ್ಷಿಯಾಗಿದೆ.) ಆದರೆ 'ಸಾವಿರಾರು ನದಿಗಳು', 'ಕಪ್ಪು ಕಾಡಿನ ಹಾಡು', ಸಂಕಲನದಲ್ಲಿ ಮಾತ್ರ 'ದಸಂಸ'ದ ಪ್ರೇರಣೆಯನ್ನು ಅಲ್ಲಗಳೆಯಲಾಗುವುದಿಲ್ಲ.

ಹಾಗಾದುದರಿಂದ ಇಂದು 'ದಸಂಸ'ಕ್ಕೆ ಸೇರಿಹೋದ ಈ ಹಾಡುಗಳು ನಿಜವಾಗಿಯೂ ಆ ನೆಲೆಯಲ್ಲಿ ಹೋರಾಟದ ಹಾಡುಗಳೇ ಆಗಿವೆ. ದಲಿತನೊಬ್ಬನ 'ಸಂಘರ್ಷ' ಹಾಗೂ ದಲಿತರ ಹಾಡುಗಳು ಸಂಘರ್ಷದ ಹಾಡುಗಳಾಗುವುದು ಸಹಜ

ಕ್ರಿಯೆ ಎಂಬುದು ಇದರಿಂದ ಸಿದ್ಧವಾದಂತಾಯಿತು. ಇತರರಿಗೆ ಯಾವುದು ಆದರ್ಶ, ಅಸಹಜವೋ (ಹೋರಾಟ) ಅದು ದಲಿತರಿಗೆ ಸ್ವಾಭಾವಿಕವಾಗುತ್ತದೆ ಎಂಬ ಈ ತಾತ್ತ್ವಿಕ ಗ್ರಹಿಕೆಯನ್ನು 'ಹೊಲೆಮಾದಿಗರ ಹಾಡುಗಳ' ಹಿನ್ನೆಲೆಯಾಗಿ ಇಲ್ಲಿ ಹೇಳಬೇಕೆನಿಸುತ್ತದೆ.

ಸಿದ್ಧಲಿಂಗಯ್ಯನವರ ಯೋಚನಾ ಕ್ರಮದಲ್ಲಿ ಕೆಲವು ಪ್ರಮುಖ ವ್ಯಕ್ತಿಗಳ ಪ್ರಭಾವವಿರುವುದನ್ನು ಈಗಾಗಲೇ ಗಮನಿಸಲಾಗಿದೆ. ಕವಿಯಾಗಿ ಅವರನ್ನು ಪ್ರಭಾವಿಸಿದವರಲ್ಲಿ ಕುವೆಂಪು ಮುಖ್ಯರಾದವರು. ಉಳಿದಂತೆ ಲಂಕೇಶ್, ಕಿ. ರಂ. ನಾಗರಾಜ, ಜಿ. ಎಸ್. ಎಸ್. ಮೊದಲಾಗಿ ವೈಚಾರಿಕವಾಗಿ ತಮ್ಮನ್ನು ಬೆಳೆಸಿದ ವಿದ್ವಾಂಸರನ್ನು ಅವರು ಕೃತಜ್ಞತೆಯಿಂದ ನೆನಪಿಸಿಕೊಳ್ಳುತ್ತಾರೆ.

ಮಾರ್ಕ್ಸ್‌ವಾದಿಯಾಗಿ ವ್ಯವಸ್ಥೆಯ ಆಮೂಲಾಗ್ರ ಬದಲಾವಣೆಯಲ್ಲಿ ನಂಬಿಕೆಯಿರಿಸಿದ್ದ ಸಿದ್ಧಲಿಂಗಯ್ಯ ಇದೀಗ ಕರ್ನಾಟಕ ವಿಧಾನಪರಿಷತ್ತಿನ ಸದಸ್ಯರಾಗಿದ್ದಾರೆ. ಅವರೀಗ ಅಲ್ಲಿ ಪ್ರಭಾವಿ ಹಾಗೂ ಸನ್ಮಾನಿತ ವ್ಯಕ್ತಿ. ಆದರೆ ಕಾಲೇಜು ವಿದ್ಯಾರ್ಥಿಯಾಗಿದ್ದಾಗಲೂ ವಿಧಾನ ಪರಿಷತ್ತಿನೊಂದಿಗೆ ಅವರಿಗೊಂದು ಒಳ್ಳೆಯ(!) ಸಂಬಂಧವಿತ್ತು. ಮಂತ್ರಿಗಳು, ಎಂ.ಎಲ್.ಎ.ಗಳು, ಸರಕಾರ ಇವೆಲ್ಲ ನಡೆಸುವ ಪುಂಡಾಟ ಗಳನ್ನು ವಿಶಿಷ್ಟ ರೀತಿಯಲ್ಲಿ ಸಿದ್ಧಲಿಂಗಯ್ಯ ತಮ್ಮ ಸ್ನೇಹಿತರೊಂದಿಗೆ ಪ್ರತಿಭಟಿಸು ತ್ತಿದ್ದರು. ಸರಕಾರದ ವಿರುದ್ಧ ಕರಪತ್ರಗಳನ್ನು ಅಚ್ಚುಮಾಡಿ, ಬಚ್ಚಿಟ್ಟುಕೊಂಡು ವಿಧಾನಸೌಧದ ಗ್ಯಾಲರಿಯೊಳಗೆ ಅಧಿಕಾರಿಗಳ (ಮಂತ್ರಿಗಳ) ಮುಖಕ್ಕೆ ಎರಚುತ್ತಿದ್ದರು. ತತ್ಫಲವಾಗಿ ಅಲ್ಲೇ ಏಟು, ಲಾಕಪ್‌ಗಳನ್ನು ಅನುಭವಿಸಿ ಬಿಡುಗಡೆ ಪಡೆಯುತ್ತಿದ್ದರು.

ಹೀಗೆ ಹೋರಾಟದ ಮುಂಚೂಣಿಯಲ್ಲಿದ್ದ, ಕಿಡಿಯಂತಿದ್ದ, ಸವರ್ಣೀಯರೊಂದಿಗಿನ ಸಂಘರ್ಷದಲ್ಲಿ ನಂಬಿಕೆಯಿರಿಸಿದ್ದ ಅವರೀಗ 'ಮೆದು' ವಾಗಿದ್ದಾರೆ. ಪರಸ್ಪರ ಈರ್ವರೂ ಸಾಮರಸ್ಯದಿಂದಿರಬೇಕೆಂಬ ನಂಬಿಕೆಯವರಾಗಿದ್ದಾರೆ. ಇದೊಂದು ವಿಚಿತ್ರವನ್ನು ಇಲ್ಲಿ ಪ್ರಸ್ತಾಪಿಸಬೇಕೆನಿಸುತ್ತದೆ, ನಮ್ಮ ಅನೇಕ ವಿಚಾರವಾದಿಗಳ 'ಪೂರ್ವಾಶ್ರಮ' ಮಾರ್ಕ್ಸ್‌ವಾದವಾಗಿರುತ್ತದೆ. ಅವರು ಬರಬರುತ್ತಾ ಗಾಂಧಿವಾದಿಗಳಾಗುತ್ತಾರೆ. ಆದರೆ ಈ ವಿಷಯದಲ್ಲಿ ಸಿದ್ಧಲಿಂಗಯ್ಯ ಇನ್ನೂ ಸ್ವಲ್ಪ ಭಿನ್ನ. ದೇವಾಲಯಕ್ಕೆ ದಲಿತ ಅರ್ಚಕರನ್ನು ನೇಮಿಸುವ, ವೀರಶೈವ ಮಠದ ಉತ್ತರಾಧಿಕಾರಿಯಾಗಿ ದಲಿತನನ್ನು ನೇಮಿಸುವ ಕೆಲಸ ಕಾರ್ಯಗಳಿಗೆ ಪ್ರೋತ್ಸಾಹ ನೀಡಬೇಕು ಎನ್ನುತ್ತಾರೆ ಅವರು. ಹಾಗಾದರೆ ''ಭೂ ಹೋರಾಟಕ್ಕೆ ಪ್ರೋತ್ಸಾಹ ಬೇಡವೇ'' ಎಂದರೆ ದಲಿತರ ಮೂಲಭೂತ ಸಮಸ್ಯೆಯಾದ 'ಭೂಮಿ'ಯ ಬಗೆಗೆ ಸಂಘರ್ಷವಾಗಲೇಬೇಕು, ಅದು ಮುಖ್ಯವಾದುದು ಎನ್ನುತ್ತಾರೆ. ಬಾಲ್ಯದಲ್ಲಿ ತಮ್ಮ ಕಲ್ಪನೆಯಾಗಿದ್ದ ಹೋರಾಟ ಇದೀಗ 'ದಲಿತ ಸಂಘರ್ಷ ಸಮಿತಿ' ಯಾಗಿ ಆ ಸಮಾಜಕ್ಕೆ ನೀಡಿದ ಎರಡು ಮುಖ್ಯ ಕೊಡುಗೆಗಳನ್ನು ಅವರು ಹೀಗೆ ಗುರುತಿಸುತ್ತಾರೆ.

**೧. ದಲಿತರ ಯೋಚನೆಯ ದಿಕ್ಕು ಬದಲಾದುದು:**

ಅಂದರೆ ಇಂದು ದಲಿತರು ಸ್ವಾಭಿಮಾನಿಗಳಾಗಿದ್ದಾರೆ. ನಮ್ಮ ಸಹಾಯಕ್ಕೆ 'ಸಂಘದವರು ಬರುತ್ತಾರೆ' ( ಅವರು ಬರಲಿ, ಬಾರದಿರಲಿ!) ಎಂಬ ನಂಬಿಕೆ ಅವರಲ್ಲಿ ಬಲವಾಗಿ ಬೇರೂರಿದೆ.

**೨. ಸನಾತನಿಗಳ ಯೋಚನೆಯ ದಿಕ್ಕು ಬದಲಾದುದು:**

ಒಂದು ಕಾಲದಲ್ಲಿ ನಾಯಿ-ನರಿಗಳಿಗಿಂತ ಕೀಳಾಗಿ ದಲಿತರನ್ನು ಕಾಣುತ್ತಿದ್ದ ಸನಾತನಿಗಳು ಇಂದು ನಿಧಾನಕ್ಕೆ ಅರಿವು ಮೂಡಿಸಿಕೊಳ್ಳುತ್ತಿದ್ದಾರೆ. ಮುಖ್ಯವಾಗಿ 'ದಲಿತ ಶಕ್ತಿ'ಯನ್ನು ಅವರು ಗಂಭೀರವಾಗಿ ಪರಿಗಣಿಸಿದ್ದಾರೆ. ಇದೀಗ ಸಿದ್ಧಲಿಂಗಯ್ಯ ವಿಧಾನ ಪರಿಷತ್ತಿನಲ್ಲಿ ನೇಮಿತ ಸದಸ್ಯರಾಗಿ ತಮ್ಮ ಮೊದಲ ಅವಧಿಯನ್ನು ಪೂರೈಸಿ ಐತಿಹಾಸಿಕವೆಂಬಂತೆ ಎರಡನೆಯ ಅವಧಿಗೂ ನೇಮಕಗೊಂಡಿದ್ದಾರೆ. ಸಿದ್ಧಲಿಂಗಯ್ಯನವರು ತಮ್ಮ ಮೊದಲ ಅವಧಿಯಲ್ಲಿ ನಿರ್ವಹಿಸಿದ ರೀತಿ ನೀತಿಗಳನ್ನು ಮಾಡಿದ ಸೇವೆಯನ್ನು, ದಲಿತರು ಮತ್ತು ಎಲ್ಲ ಶೋಷಿತರ ಪರವಾಗಿ ದನಿಯೆತ್ತಿದ್ದನ್ನೂ ಸರ್ಕಾರ ಸರಿಯಾಗಿಯೇ ಗುರುತಿಸಿದೆ. ಒಬ್ಬ ದಲಿತ ಕವಿ ಸತತ ಹನ್ನೆರಡು ವರ್ಷಗಳಿಗೆ ವಿಧಾನಪರಿಷತ್ತಿನ ಪ್ರತಿನಿಧಿ ಎಂದಾಗ ಅದು ಆ ವ್ಯವಸ್ಥೆಯ ಆರೋಗ್ಯಪೂರ್ಣ ಕಾಳಜಿಯನ್ನು ಪ್ರಕಟಿಸುತ್ತದೆ ಕೂಡ.

# ಕೃತಿಗಳು

ಕವಿಯಾಗಿಯೇ ಪ್ರಸಿದ್ಧರಾಗಿರುವ ಸಿದ್ಧಲಿಂಗಯ್ಯ ಈವರೆಗೆ ೧. ಹೊಲೆಮಾದಿಗರ ಹಾಡು (೧೯೭೫) ೨. ಸಾವಿರಾರು ನದಿಗಳು (೧೯೭೯) ೩. ಕಪ್ಪು ಕಾಡಿನ ಹಾಡು (೧೯೮೨) ಹೀಗೆ ಮೂರು ಕವನ ಸಂಕಲನಗಳನ್ನು ಪ್ರಕಟಿಸಿದ್ದಾರೆ. ‘ಪಂಚಮ ಮತ್ತು ನೆಲಸಮ’ ಹಾಗೂ ‘ಏಕಲವ್ಯ’ ಇವರ ನಾಟಕಗಳು. ಇವುಗಳಲ್ಲಿ ‘ಪಂಚಮ’ ಹಾಗೂ ‘ನೆಲಸಮ’ ಒಂದೇ ಸಂಕಲನದಲ್ಲಿರುವ ಎರಡು ನಾಟಕಗಳಾಗಿರುವುದರಿಂದ ಅವರು ಮೂರು ನಾಟಕಗಳನ್ನು ಬರೆದಂತಾಯಿತು. ಇದರೊಂದಿಗೆ ‘ ಹಕ್ಕಿನೋಟ’ಪ ವಿಮರ್ಶಾಲೇಖನಗಳ ಸಂಗ್ರಹ (೧೯೯೧), ಪ್ರಬಂಧ ಸಂಕಲನವಾದ ‘ಅವತಾರಗಳು’ (೧೯೮೧) ಎಂಬೆರಡು ಕೃತಿಗಳನ್ನೂ ಬರೆದಿದ್ದಾರೆ. ಇದಲ್ಲದೆ ನಾಡಿನ ಬೇರೆ ಬೇರೆ ಪತ್ರಿಕೆಗಳಲ್ಲಿ ಅವರ ಕೆಲವೊಂದು ಲೇಖನಗಳು ಪ್ರಕಟವಾಗಿವೆ. ‘ಸಾಹಿತ್ಯಾಭಿವ್ಯಕ್ತಿಯಲ್ಲಿ ಸಾಮಾನ್ಯ ಮನುಷ್ಯ’ ಅಂತಹ ಪ್ರಮುಖ ಲೇಖನ. ಉಳಿದಂತೆ ಬೆಂಗಳೂರು ವಿಶ್ವವಿದ್ಯಾಲಯ ಪ್ರಕಟಿಸುವ ‘ಸಾಹಿತ್ಯ ವಾರ್ಷಿಕ’ಗಳಲ್ಲಿ ಕಾಲಕಾಲಕ್ಕೆ ಅವರ ವಿಮರ್ಶಾತ್ಮಕ ಸಮೀಕ್ಷಾ ಲೇಖನಗಳು ಪ್ರಕಟವಾಗಿವೆ. ಇದಲ್ಲದೆ ನಾಡಿನ ವಿವಿಧ ಪತ್ರಿಕೆಯಲ್ಲಿ ಈಗಾಗಲೇ ಬಿಡಿಬಿಡಿಯಾಗಿ ಪ್ರಕಟಗೊಂಡಿರುವ ಅನೇಕ ಕವನಗಳು ಹಾಗೂ ಅಪ್ರಕಟಿತ ಕವನಗಳೂ ಸಾಕಷ್ಟು ಇವೆ. ಹಾಗಿದ್ದರೂ ಮುಂದೆ ಮಂಡಿಸಲಾಗುವ ವಿವರಗಳು ಅವರ ಪ್ರಕಟಿತ ಕೃತಿಗಳಿಗೆ ಮಾತ್ರ ಸಂಬಂಧಿಸಿದ್ದಾಗಿರುತ್ತವೆ.

**ಹೊಲೆಮಾದಿಗರ ಹಾಡು:** ಈಗಾಗಲೇ ಹೇಳಿರುವಂತೆ ೧೯೭೫ರಲ್ಲಿ ಮೊದಲ ಬಾರಿಗೆ ಪ್ರಕಟವಾದ ಈ ಕವನ ಸಂಕಲನ ಇಲ್ಲಿಯವರೆಗೆ ಏಳು ಮುದ್ರಣಗಳನ್ನು ಕಂಡಿದೆ. ನನ್ನ ಜನಗಳು, ಒಂದು ಮೂಳೆಯ ಹಾಡು, ಒಂದು ಪದ, ಸತ್ತೋ‌ಗೋರಾ, ಕ್ರಾಂತಿಪದ, ಗಳ್ಳಗಳು, ಅಡುಗೂಲಜ್ಜಿಯ ಕಥೆ, ಹಬ್ಬ, ಸುಂಟರಗಾಳಿ, ಕನ್ನಡವ್ವನಿಗೆ, ಹಣೆಬರಹವು ಎಂಬ ನಾಟಕವು, ನನ್ನವಳಿಗೆ, ಭವಿಷದ್ಗೀತೆ, ನಗ್ಬೇಕು, ಮಸಣದ ಚೆಲುವೆಗೆ, ನಾವು, ಅಂಬೇಡ್ಕರ್, ಒಂದು ದನದ ಪದ, ಹಾವುಗಳೇ ಕಚ್ಚಿ - ಹೀಗೆ ಇಪ್ಪತ್ತು ಹಾಡುಗಳು ಸಂಕಲಿತವಾಗಿವೆ. ಇವುಗಳಲ್ಲಿ ನನ್ನ ಜನಗಳು, ಕ್ರಾಂತಿಪದ, ನಾವು, ಅಂಬೇಡ್ಕರ್, ಹಾವುಗಳೇ ಕಚ್ಚಿ ಇವುಗಳು ಜನಪ್ರಿಯ ಹಾಡುಗಳಾಗಿದ್ದು ದಲಿತ, ಬಂಡಾಯ ಹಾಗೂ ಇತರ ಸಂಘಟನಾತ್ಮಕ ಕಾರ್ಯಕ್ರಮಗಳಲ್ಲಿ ಕೇಳಿ ಬರುವ ಹಾಡುಗಳಾಗಿವೆ.

ಈ ಸಂಕಲನ ಕುರಿತು ಕಾಳೇಗೌಡ ನಾಗವಾರರು ಈ ರೀತಿಯಾಗಿ ಅಭಿಪ್ರಾಯ ಪಡುತ್ತಾರೆ:

''ಸಿದ್ಧಲಿಂಗಯ್ಯನವರ ಇಪ್ಪತ್ತು ಕವನಗಳ ಈ ಮೊದಲ ಸಂಕಲನ, ಕನ್ನಡದ ಬರವಣಿಗೆಗೆ ಅರ್ಥಪೂರ್ಣವಾದ ಹೊಸದಿಕ್ಕನ್ನು ತೋರಿಸಿಕೊಟ್ಟು ಸಾಂಸ್ಕೃತಿಕ ಮಹತ್ವವನ್ನು ಹೊಂದಿದೆ. ತನ್ನೆಲ್ಲ ನೋವು ಹಾಗೂ ಚಾರಿತ್ರಿಕವಾದ ದೀರ್ಘಕಾಲದ ಸುಲಿಗೆಯ ಪೂರ್ಣಕಥನವನ್ನು ಥಟ್ಟನೆ ವ್ಯವಸ್ಥೆಯ ಮುಖಕ್ಕೆ ಒಡ್ಡಿ ಹೇಳುವ ರೊಚ್ಚು ಮತ್ತು ಎದೆಗಾರಿಕೆಯ ಸಂಕೇತವಾಗಿ ಈ ಸಂಕಲನದ ಶೀರ್ಷಿಕೆಯೂ ಕಾಣಿಸಿಕೊಂಡಿದೆ. ಓದುವ ಕಣ್ಣು, ಕೇಳುವ ಕಿವಿ, ತಿಳಿಯುವ ಮನಸ್ಸುಗಳನ್ನು ಸಮುದಾಯದ ಮಟ್ಟದಲ್ಲಿ ದಟ್ಟವಾಗಿ ಸೆರೆಹಿಡಿಯಬಲ್ಲ ಇಲ್ಲಿನ ಅನೇಕ ಸಾಲುಗಳಿಗೆ ಅತ್ಯಪೂರ್ವವಾದ ಚೈತನ್ಯವಿದೆ.........'' ಎನ್ನುತ್ತಾ ನಾಡಿನಾದ್ಯಂತ ಚಿಂತನಶೀಲ ಸಾಹಿತ್ಯಾಭ್ಯಾಸಿಗಳೆಲ್ಲರ ಗಮನವನ್ನು ಸೆಳೆದ 'ಹೊಲೆಮಾದಿಗರ ಹಾಡು' ಚಾರಿತ್ರಿಕವಾಗಿ ಕೂಡ ಕನ್ನಡ ಕಾವ್ಯ ಮಾರ್ಗದಲ್ಲಿ ಹೊಸ ಆಶೆ, ಭರವಸೆಗಳನ್ನು ಮೂಡಿಸಿದ ಮುಖ್ಯ ಕೃತಿಯಾಗಿದೆ.

'ಹೊಲೆಮಾದಿಗರ ಹಾಡು' ಹೆಸರೇ ಹೇಳುವಂತೆ ಅಸ್ಪೃಶ್ಯರ ಹಾಡು. ಇದರ ಪ್ರಾರಂಭದಲ್ಲಿ ಇದನ್ನು ಗಟ್ಟಿಯಾಗಿ ಲಯಬದ್ಧವಾಗಿ ಹಾಡಿದಾಗ ಓದಿಕೊಂಡಾಗ ಮಾತ್ರ ನನ್ನ ರಚನೆಯ ಉದ್ದೇಶ ಸ್ಪಷ್ಟವಾಗುತ್ತದೆ ಎಂದು ಕವಿ ಹೇಳಿಕೊಂಡಿದ್ದಾರೆ. ಹಾಗಾದುದರಿಂದ ಇವು ಸ್ವಗತ ಮಾದರಿಯ ರಚನೆಗಳಲ್ಲ.

ಹಾಡುಗಳು ಯಾವಾಗಲೂ ಸಮುದಾಯಕ್ಕೆ ಸಂಬಂಧ ಪಟ್ಟವುಗಳು. ಏಕೆಂದರೆ ಹಾಡಿದಾಗ ಅದನ್ನು ಕೇಳುವ ಮಂದಿ ಇರಲೇ ಬೇಕಾಗುತ್ತದೆ. ಆದರೆ ಸ್ವಗತ ಮಾದರಿಯ ಕವನದ ಓದಿನಲ್ಲಿ ಕೇಳುವ ಸಮುದಾಯವಿಲ್ಲದೆ ವ್ಯಕ್ತಿಗತ ನೆಲೆಯಲ್ಲೇ ವಿರಮಿಸುತ್ತದೆ. ಇಂತಹ ಸಂದರ್ಭದಲ್ಲಿ ವ್ಯಕ್ತಿ ಸಮುದಾಯದಿಂದ ಬೇರ್ಪಟ್ಟು ಪ್ರತ್ಯೇಕಿತನಾಗುತ್ತಾನೆ. ನಮ್ಮ ನವ್ಯಕಾವ್ಯದ ಅನೇಕ ರಚನೆಗಳು ಈ ಮಾದರಿಯವು.

ಇಂತಹ ಸಂದರ್ಭದಲ್ಲಿ ಸಿದ್ಧಲಿಂಗಯ್ಯ 'ಇವು ಹಾಡುಗಳು' ಎಂಬುದಾಗಿ ಘೋಷಿಸಿಕೊಂಡೇ ಕಾವ್ಯ ಬರೆದರು. ಇದಕ್ಕೆ ಮುಖ್ಯ ಕಾರಣ ಆ ಹಾಡುಗಳು ಹೋರಾಟದ ಹಿನ್ನೆಲೆಯನ್ನಿಟ್ಟುಕೊಂಡು ಹೊರಬಂದುದೇ ಆಗಿತ್ತು. ಹೋರಾಟ ಯಾವತ್ತೂ ಸಾಮುದಾಯಿಕವೇ ಹೊರತು ವೈಯಕ್ತಿಕವಲ್ಲ. ಹಾಗಾದುದರಿಂದಲೇ ಸಿದ್ಧಲಿಂಗಯ್ಯನವರ ಹಾಡುಗಳು ಸಮೂಹದ ಹಾಡುಗಳಾಗಿಯೇ ಹೊರಬಂದವು.

'ಹೊಲೆಮಾದಿಗರ ಹಾಡಿ'ನಲ್ಲಿ ಮುಖ್ಯವಾಗಿ ಕಂಡು ಬರುವುದು ಸಿಟ್ಟು. ಕಾವ್ಯವು ಕಾಂತಾಸಂಮಿತಾ ಎಂಬ ದೃಷ್ಟಿಕೋನ ಇಲ್ಲಿ ಕಂಡುಬರುವುದಿಲ್ಲ. ಹಾಗಾದುದರಿಂದ ಕಾವ್ಯವನ್ನು 'ಸಂತೋಷ'ಕ್ಕಾಗಿ ಓದುವುದಷ್ಟೇ ಮುಖ್ಯವಾಗದೆ ಹೋರಾಟದ ಅಸ್ತ್ರವನ್ನಾಗಿಸಿಕೊಳ್ಳುವುದೂ ಮುಖ್ಯವಾಗಬೇಕಾಗುತ್ತದೆ. ಈ ಸಂಕಲನದಲ್ಲಿ ಸಿಟ್ಟು ತನ್ನೆಲ್ಲ ಸಾಮರ್ಥ್ಯವನ್ನು ಮೈದುಂಬಿಸಿಕೊಂಡು ಹೊರಬರುತ್ತದೆ. ಆದರೆ ಹಾಗೆ ಹೊರಬರುವ ಸಿಟ್ಟನ್ನು ತಾಳಿಕೊಳ್ಳುವ ಶಕ್ತಿ ಭಾಷೆಗೆ ಇಲ್ಲವೆನಿಸುತ್ತದೆ! ಮಾದರಿಗಾಗಿ ಸಿಟ್ಟಿನ ತುಂಡಿನಂತಿರುವ ಈ ಸಂಕಲನದ ಒಂದು ಪದವನ್ನು ನೋಡಬಹುದು:

ಇಕ್ರಲಾ ವದೀರ್ಲಾ
ಈ ನನ್ ಮಕ್ಳ ಚರ್ಮ ಎಬ್ರಲಾ
ದೇವ್ರು ಒಬ್ನೇ ಅಂತಾರೆ
ಓಣಿಗೊಂದೊಂದ್ ತರಾ ಗುಡಿ ಕಟ್ಸವ್ರೆ ಎಲ್ಲಾರು ದೇವ್ರ ಮಕ್ಳು ಅಂತಾರೆ
ಹೊಲೇರ್ನ ಕಂಡ್ರೆ ಹಾವ್ ಕಂಡಂಗಾಡ್ತಾರೆ
ಹೋಟ್ಲು, ಬಾವಿ; ಮನೆ ಯಾವುದ್ಕೂ ಸೇರ್ಸಲ್ವಲ್ರೋ
ನಮ್ ಹೇಲ್ ತಿನ್ನೋ ನಾಯ್ನ ಕ್ವಾಣೆವಳೀಕ್ ಬುಟ್ಕತ್ತಾರೆ
ನಾವ್ ಬೆಳೆದಿತ್ ತಿಂತಾರೆ ನಾವ್ ದುಡಿದಿತ್ ತಗತ್ತಾರೆ
ನಾವ್ ಮಾತ್ರಾ ಬ್ಯಾಡಾ
ಹೊಲೇರು, ಮಾದುಗ್ರು ಅನ್ನೋ ಬದ್ಲು
ಹರಿಜನಾ ಅಂತ ಕರ್ದು ನಗ್ತಾರಲ್ಲಪ್ಪೋ
ನಮ್ಮಾಲ್ ಮೀಟಿಂಗ್ ಮಾಡ್ತಾರೆ, ಕಾನೂನು ಮಾಡ್ತಾರೆ
ನಮ್ಮ ಯಸ್ರೇಳಿ ಹಾರ ಹಾಕ್ತಾರೆ, ಹಾಕುಸ್ಕತ್ತಾರೆ
ನಮ್ಮುನ್ನ ಉದ್ಧಾರ ಮಾಡ್ತೀವಿ ಅಂತ ಪೇಪ್ರೇಲಿ
ಮೈಕೇಲಿ ಜೋರಾಗಿ ಕೂಗ್ತಾ ಅವ್ರಲ್ಲಪ್ಪೋ
ನಾವ್ ಮಾತ್ರ ಇಸ್ಕೋಲ್‌ಗೋಗಾಂಗಿಲ್ಲ ಜೀತಕ್ಕೋಗ್ಬೇಕು
ತಲೆ ಎತ್ತಾಂಗಿಲ್ಲ - ಬಗ್ಗುಸ್ಬೇಕು
ಈ ನನ್ ಮಕ್ಳು ಕಳ್ಳಾಟ ಆಡ್ತಾ ಅವ್ರೆ ಅದಕ್ಕೇನೆ
ಇಕ್ರಲಾ ವದೀರ್ಲಾ ಈ ಸೂಳೇ ಮಕ್ಳ ಮೂಳೇ ಮುರೀರ್ಲಾ

ಈ ಕವನ ಕುರಿತು ಅನೇಕರು ಆಕ್ಷೇಪಿಸುತ್ತಾರೆ. ಕಾವ್ಯ ಸೊರಗಿತು ಎಂಬ ಅಭಿಪ್ರಾಯಗಳೂ ಬಂದಿವೆ. ಆದರೆ ಇಲ್ಲಿ ಕಾವ್ಯ ಸೊರಗಿಲ್ಲ. ಕಾವ್ಯವು ಭಾಷೆಯ ಒಂದು ಪ್ರಕ್ರಿಯೆಯಾದುದರಿಂದ ಸೋತದ್ದು ನಮ್ಮ ಭಾಷೆಯೇ! ಏಕೆ ಸೋತಿತೆಂಬುದು ಬಹುಮುಖ್ಯವಾದ ಪ್ರಶ್ನೆಯಾದುದರಿಂದ ನಮ್ಮ ಕಾವ್ಯ ಪರಂಪರೆಯತ್ತ ವಾಲಬೇಕಾಗುತ್ತದೆ.

ಕನ್ನಡ ಕಾವ್ಯ ಪರಂಪರೆಯನ್ನು ದೃಷ್ಟಿಸಿ ಮಾತಾಡುವುದಾದರೆ ಪಂಪನಿಂದ ಇಲ್ಲಿಯವರೆಗೆ ಕೆಲವೇ ಕೆಲವು ಭಾವಗಳಿಗೆ ಸಮರ್ಪಕವಾದ ಅಭಿವ್ಯಕ್ತಿ ಭಾಷೆಯಲ್ಲಿ ಸಿಕ್ಕಿದೆ. ಆನಂದಾತ್ಮಕವಾಗಿ, ಕಾಂತಾಸಂಮಿತವಾಗಿ ಕಾವ್ಯವನ್ನು ಹೇಳಬೇಕಾಗಿ ಬಂದಿರುವುದರಿಂದ ಭಾಷೆಯನ್ನೂ ಅದಕ್ಕನುಗುಣವಾಗಿಯೇ ದುಡಿಸಿಕೊಳ್ಳಲಾಗಿದೆ. ಆದರೆ ವೈಯಕ್ತಿಕ ನೋವು, ಸಿಟ್ಟು, ಹೋರಾಟದ ಸ್ಥಾಯಿ ನಮ್ಮ ಕಾವ್ಯ ಪರಂಪರೆಯಲ್ಲೇ ಇಲ್ಲವಾದುದರಿಂದ ಭಾಷೆಗೆ ಆ ಸ್ತರ ಅಭಿವ್ಯಕ್ತಿಯೇ ಸಾಧ್ಯವಿಲ್ಲವಾಗುತ್ತದೆ.

ಹಾಗಾದುದರಿಂದ ಆನಂದವನ್ನು ಭಾಷೆಯ ಮೂಲಕ ಹೇಗೆ ಸಮರ್ಥವಾಗಿ ಅಭಿವ್ಯಕ್ತಿಸಬಹುದೋ ಸಿಟ್ಟನ್ನು ಹಾಗೆ ಕಲಾತ್ಮಕವಾಗಿ ಅಭಿವ್ಯಕ್ತಿಗೊಳಿಸಲು ಪಳಗಿದ ಭಾಷೆಯ ಹಿನ್ನೆಲೆ ನಮಗಿನ್ನೂ ದಕ್ಕಿಲ್ಲ. ಹಾಗಾದುದರಿಂದಲೇ ಮೊದಲ ಬಾರಿಗೆ ಸಿದ್ಧಲಿಂಗಯ್ಯನವರು ಸಿಟ್ಟನ್ನು ಕಾವ್ಯದಲ್ಲಿ ಅಭಿವ್ಯಕ್ತಿಗೊಳಿಸಿದಾಗ ಕನ್ನಡ ಭಾಷೆಯೇ ಸೋತು 'ಇಕ್ರಲಾ ವದೀರ್ಲಾ' ಎಂಬ ಭಾವನೆಯೇ ಮೈದುಂಬಿ ಬರುತ್ತದೆ. ಇಲ್ಲಿಯ ಅಭಿಪ್ರಾಯವಿಷ್ಟೇ, ಅಂತಹ ಕವನಗಳನ್ನು ವಿಮರ್ಶಿಸುವಾಗ ಕಾವ್ಯ ಸಮರ್ಥವಾಗಿದೆಯೋ ಎನ್ನುವುದಕ್ಕಿಂತ ಮುಖ್ಯವಾಗಿ ಭಾಷೆಗೆ ಆ ಸಾಮರ್ಥ್ಯವಿದೆಯೋ ಅಂತಹ ಕಾವ್ಯಭಾಷೆಗೊಂದು ಪರಂಪರೆಯಿದೆಯೋ ಎಂಬುದನ್ನೂ ಪರಿಗಣಿಸಬೇಕಾಗುತ್ತದೆ. ಈ ಹಿನ್ನೆಲೆಯಲ್ಲಿ ಸಿದ್ಧಲಿಂಗಯ್ಯ ಮೊದಲ ಬಾರಿಗೆ ಕನ್ನಡ ಭಾಷೆಗೆ ನೋವಿನ ಸ್ಪರ್ಶ ನೀಡುತ್ತಿದ್ದಾರೆ; ಆದರೆ ಅದರ ಅನುಭವವಿಲ್ಲದ ಭಾಷಾ ಪರಂಪರೆಯೇ ಇಲ್ಲಿ ತಲ್ಲಣಿಸುತ್ತಿದೆ ಎನ್ನದೆ ವಿಧಿಯಿಲ್ಲ.

'**ಸಾವಿರಾರು ನದಿಗಳು**': ಈ ಕವನ ಸಂಕಲನ ೧೯೭೯ ರಲ್ಲಿ ಪ್ರಕಟವಾಯಿತು. ಸಾವಿರಾರು ನದಿಗಳು, ಬೆಲ್ಜಿಯ ಹಾಡು, ಕೆಂಪು ಸೂರ್ಯ, ದಲಿತರು ಬರುವರು, ಬಿದ್ದಾವು ಮನೆಗಳು, ಕರಾಳ ರಾಣಿಯ ಕಥೆ, ಕತ್ತೆ ಮತ್ತು ಧರ್ಮ, ಈ ದೇಶದ ಸೆರೆಮನೆ, ಕಂಡೆ ನನ್ನವಳ ಒಂದು ದಿವಸ, ಹೋರಾಟವೇ ದಾರಿ, ನಿನ್ನ ಮಗನ ಕೊಂದರು, ಚೋಮನ ಮಕ್ಕಳ ಹಾಡು, ಮಾತಾಡಬೇಕು, ಮೆರವಣಿಗೆ, ಬಂದಿರುವರು ಹುಲಿಗಳಾಗಿ, ಅಲ್ಲೆ ಕುಂತವರೆ-ಹೀಗೆ ೩೦ ಕವನಗಳು ಈ ಸಂಕಲನದಲ್ಲಿವೆ.

ಡಾ. ಸಿದ್ಧಲಿಂಗಯ್ಯನವರ ಅತ್ಯುತ್ಕೃಷ್ಟ ಕವನವೆನಿಸಿದ, ಖಂಡಕಾವ್ಯವೂ ಆದ ''ಅಲ್ಲೇ ಕುಂತವರೆ'' ಕುರಿತು ಪ್ರಸಿದ್ಧ ವಿಮರ್ಶಕ ಡಾ. ಡಿ. ಆರ್. ನಾಗರಾಜ್ ಹೀಗೆ ಹೇಳುತ್ತಾರೆ - ''ಇದು ಕನ್ನಡ ಭಾಷೆಯ ಒಂದು ಅತ್ಯುತ್ತಮ ರಾಜಕೀಯ ಕವನಗಳಲ್ಲೊಂದು. ಇದು ರಾಜ್ಯಶಾಹಿಯೊಂದರ ಬರ್ಬರತೆಯನ್ನು ವಿವರಿಸುತ್ತದಲ್ಲದೆ ಹಾಗೆ ಬರ್ಬರತೆಗೊಳಗಾದ ಸಮಾಜವೊಂದರ ನಾಯಕನನ್ನು ಹಿಂಸೆಗೊಳಪಡಿಸುವ ತಂತ್ರಗಳನ್ನು ಬಿಚ್ಚಿಡುತ್ತದೆ. ಜಾನಪದ ಶೈಲಿ ಮತ್ತು ತಂತ್ರಗಳನ್ನು ಅಳವಡಿಸಿಕೊಂಡ ಕಾವ್ಯವಾಗಿ ಕಂಡರೂ ಅದು ನಿರೂಪಿಸುವ ವಸ್ತು ಮಾತ್ರ ಆಧುನಿಕ ಜಗತ್ತಿನ ವೈರುಧ್ಯಗಳನ್ನು ಕುರಿತದ್ದು. ಈ ಕಾವ್ಯ ಸಿದ್ಧಲಿಂಗಯ್ಯನವರ ಕಾವ್ಯ ಬೆಳವಣಿಗೆಯ ಒಂದು ಪ್ರಮುಖ ಘಟ್ಟ.....''

(India International centre QUARTERLY)

ಸಾವಿರಾರು ನದಿಗಳು ಕವನ ಸಂಕಲನದ ಬಗೆಗಿನ ಚರ್ಚೆಯನ್ನು 'ಹೊಲೆಮಾದಿಗರ ಹಾಡು' ಕವನ ಸಂಕಲನದೊಂದಿಗೇ ಆರಂಭಿಸಬಹುದು. ಹೊಲೆಮಾದಿಗರ ಹಾಡಿನಲ್ಲಿ ಜಾತೀಯತೆಯ ಹಿನ್ನೆಲೆಯೊಂದನ್ನು ಗಮನಿಸಬಹುದು. ಅಲ್ಲಿ ದಲಿತರೆಂದರೆ ಬಹುಮಟ್ಟಿಗೆ ಹೊಲೆಮಾದಿಗರೇ, ಅಸ್ಪೃಶ್ಯರೇ. ಅಲ್ಲಿಯ ಭಾಷೆ, ಭಾವನೆಗಳೆಲ್ಲವೂ ಬಹುಮಟ್ಟಿಗೆ ದಲಿತರವೇ. ಹಾಗಾದುದರಿಂದ ಹೋರಾಟವೆಂದರೆ ದಲಿತರ ಹೋರಾಟ

ಎಂಬ ಅಭಿಪ್ರಾಯದಲ್ಲಿದೆ. ಈ ಹೋರಾಟದ ನೆಲೆಯಿರುವುದು ಜಾತೀಯ ಹಿನ್ನೆಲೆಯಲ್ಲಾದುದರಿಂದ ಅದು ಸವರ್ಣೀಯರ ವಿರುದ್ಧ ದಲಿತರ ಹೋರಾಟವೇ ಆಗಿದೆ. ಇಲ್ಲಿಯ ಶೋಷಣೆಯ ನೆಲೆ ಜಾತೀಯವಾದುದೆಂಬುದು ಈ ನೆಲೆಯಲ್ಲಿ ಸ್ಪಷ್ಟವೇ ಆಗಿದೆ.

ಆದರೆ 'ಸಾವಿರಾರು ನದಿಗಳು' ಸಂಕಲನದಲ್ಲಿ ಹೋರಾಟದ ವ್ಯಾಪ್ತಿ ಹಿಗ್ಗಿದೆ. ಹೋರಾಟವೆನ್ನುವುದು ಸಾಗರೋಪಾದಿಯಾದುದು ಎಂಬ ನೆಲೆಯೊಂದಿಗೆ ಅದಕ್ಕೆ ''ಸಾವಿರಾರು ನದಿಗಳು'' ಸೇರಬೇಕೆನ್ನುವ ಆಶಯವೂ ಇಲ್ಲಿದೆ. ಏಕೆಂದರೆ ಹನಿಗೂಡಿ ಹಳ್ಳ, ಹಳ್ಳಗೂಡಿ ನದಿ, ನದಿಗಳು ಸೇರಿ ಸಮುದ್ರ! ಸಾವಿರಾರು ನದಿಗಳು ಕವನದ ಈ ಸಾಲುಗಳನ್ನು ನೋಡಬಹುದು:

ಕಪ್ಪುಮುಖ ಬೆಳ್ಳಿಗಡ್ಡ ಉರಿಯುತ್ತಿರುವ ಕಣ್ಣುಗಳು
ಹಗಲು ರಾತ್ರಿಗಳನು ಸೀಳಿ ನಿದ್ದೆಯನ್ನು ಒದ್ದರು
ಕಂಬಳಿಗಳು ಕೊರಗಿದವು ಎದ್ದೇಳುವ ರೊಚ್ಚಿಗೆ
ಭೂಕಂಪನವಾಯಿತು ಅವರು ಕುಣಿದ ಹುಚ್ಚಿಗೆ
ಇರುವೆಯಂತೆ ಹರಿವಸಾಲು ಹುಲಿಸಿಂಹದ ದನಿಗಳು
ಧಿಕ್ಕಾರ ಧಿಕ್ಕಾರ ಅಸಮಾನತೆಗೆ
ಎಂದೆಂದಿಗೂ ಧಿಕ್ಕಾರ ಶ್ರೀಮಂತರ ಸೊಕ್ಕಿಗೆ
ಲಕ್ಷಾಂತರ ನಾಗರುಗಳು ಹುತ್ತಬಿಟ್ಟು ಬಂದಂತೆ
ಊರತುಂಬ ಹರಿದರು
ಪಾತಾಳಕೆ ಇಳಿದರು
ಆಕಾಶಕೆ ನೆಗೆದರು
ಬೀದಿಯಲ್ಲಿ ಗಲ್ಲಿಯಲ್ಲಿ
ಬೇಲಿಮೆಳೆಯ ಮರೆಗಳಲ್ಲಿ
ಯಜಮಾನರ ಹಟ್ಟಿಯಲ್ಲಿ ಧಣಿಕೂರುವ ಪಟ್ಟದಲ್ಲಿ
ಎಲ್ಲೆಲ್ಲೂ ನನ್ನ ಜನ ನೀರಿನಂತೆ ನಿಂತರು.

ಒಟ್ಟು ಕವನದಲ್ಲಿಯೇ ಬಹುಮುಖ್ಯವಾದ ಈ ಸಾಲುಗಳಲ್ಲಿ ಅಸಮಾನತೆ ಮತ್ತು ಶ್ರೀಮಂತರ ವಿರುದ್ಧ ಜನ ನೀರಿನಂತೆ ನಿಂತಿರುವುದು ಕಂಡುಬರುತ್ತದೆ. ಕೇವಲ ಈ ಕವನದಲ್ಲಿ ಮಾತ್ರವಲ್ಲದೆ ಈ ಸಂಕಲನದ ಎಲ್ಲಾ ಕವನಗಳಲ್ಲಿಯೂ ಈ ಮನೋಭಾವ ಕಂಡುಬರುತ್ತದೆ. 'ದಲಿತರು ಬರುವರು' ಕವನದಲ್ಲಿ ಇದರ ಸ್ಪಷ್ಟ ಚಿತ್ರಣವಿದೆ.

ದಲಿತ ಭಾರತದ ಬಾವುಟದಲ್ಲಿ
ನಿಂತರು ರೈತರು ಕಾರ್ಮಿಕರು

ಅಂದರೆ ಹೋರಾಟದಲ್ಲಿ ದಲಿತರ ಬೆಂಬಲಕ್ಕೆ ರೈತರು ಕಾರ್ಮಿಕರು ಸಿದ್ಧರಾಗುವ ದೃಶ್ಯ ಇಲ್ಲಿದೆ. ಹೀಗೆ ಹೊಲೆಮಾದಿಗರ ಹಾಡು 'ಸಾವಿರಾರು ನದಿ'ಗಳಾಗಿರುವುದು ಇಲ್ಲಿ ಸ್ಪಷ್ಟವಾಗಿದೆ.

ಹೊಲೆಮಾದಿಗರ ಹಾಡು ಮತ್ತು ಸಾವಿರಾರು ನದಿಗಳು ಸಂಕಲನದಲ್ಲಿ ಆಗಿರುವ ಕವಿಯ ಮನೋಭಾವದ ಬದಲಾವಣೆಗೆ ಮುಖ್ಯ ಕಾರಣ ಕವಿಯ ಚಿಂತನೆಯ ವೈಶಾಲ್ಯತೆ. ಮೊದಲ ಸಂಕಲನ ಜಾತಿ ಸಂಘರ್ಷಕ್ಕೆ ಬದ್ಧವಾದುದು. ಇದು ಅಂಬೇಡ್ಕರ್ ಅವರ ದೃಷ್ಟಿಕೋನಕ್ಕೆ ಪೂರಕವಾದುದು. ಆದರೆ ಎರಡನೆಯದರಲ್ಲಿ ಬರುವುದು ವರ್ಗಸಂಘರ್ಷ; ಶೋಷಿತ-ಶೋಷಕರ ನಡುವಿನ ಸಂಘರ್ಷಕ್ಕೆ ಸಂವಾದಿಯಾದುದು. ಇದು ಅಂಬೇಡ್ಕರ್ ವಾದಿಯಾದ ಕವಿ ಮಾರ್ಕ್ಸ್‌ವಾದಿಯೂ ಆಗುವುದರ ಸ್ಪಷ್ಟಸೂಚನೆ.

**ಕಪ್ಪು ಕಾಡಿನ ಹಾಡು:** ಈ ಸಂಕಲನ ೧೯೮೨ ರಲ್ಲಿ ಪ್ರಕಟವಾಯಿತು. ಇದರಲ್ಲಿ ನನ್ನ ಕವನ, ಬೆಂಗಳೂರಿನ ಹಾಡು, ಸುಟ್ಟಾವು ಬೆಳ್ಳಿ ಕಿರಣ, ರಾಣಿಯ ಪ್ರೇಮ, ದೋಣಿಯ ಹಾಡು, ನಿನ್ನ ಕಣ್ಣಿನ ಮಾತು, ಕೋರಿಕೆ, ಶ್ರೀ ಮಾನ್ ಪುಟ್ಟಪ್ಪನ ಹಾಡುಗಳು, ಗೌಳಗಿತ್ತಿಯ ಹಾಡು, ನೆನಪು, ಎಚ್ಚರ, ಕಪ್ಪು ಕಾಡಿನ ಹಾಡು, ಭೂತನ ಕತೆ, ನಲವತ್ತೇಳರ ಸ್ವಾತಂತ್ರ್ಯ, ತಬರನ ಹಾಡು, ಮಾಟ ಆಗಿತ್ತು, ದಾರಿ ಯಾವುದೋ, ಸಂಪಿಗೆಯ ಮರದಲ್ಲಿ, ಕೊಳೆಗೇರಿಯ ಹಾಡು, ಗುಡಿಗೆ ಹೋಗುವವರ ಹಾಡು, ಚೋಮ ನಾಟಕದ ಎರಡು ಹಾಡುಗಳು, ಸಾಮಾನ್ಯನ ಹಾಡುಗಳು- ಹೀಗೆ ೨೨ ಕವನಗಳು ಈ ಸಂಕಲನದಲ್ಲಿವೆ.

ಸಿದ್ಧಲಿಂಗಯ್ಯನವರ ಈ ಮೂರನೆಯ ಕವನ ಸಂಕಲನದಲ್ಲಿ ನಿರ್ಣಾಯಕ ಬದಲಾವಣೆಗಳಾಗಿವೆ. ಈ ಬದಲಾವಣೆ ಭಾಷೆ ಮತ್ತು ಲಯದಲ್ಲಿದೆ ಎಂದೆನಿಸುತ್ತದೆ. ಇಕ್ರಲಾ ವದೀರ್ಲಾ ಎನ್ನುವ ರೋಷ ಭೀಷಣ ಸಾಲುಗಳು ಇಲ್ಲಿ ಕಾಣಿಸುವುದೇ ಇಲ್ಲ. ನಿಟ್ಟುಸಿರು, ಮೆಲುಮಾತು, ಸರಸದ ಧ್ವನಿಗಳು ಇಲ್ಲಿ ಕೇಳ ಬರುತ್ತವೆ. ಹಾಗಾದುದರಿಂದ ವೇಗದ ಅಬ್ಬರದ ಲಯ ಇಲ್ಲಿಲ್ಲ. ಕಾವ್ಯದ ಲಯ ಮಂದವಾಗಿದೆ. ' ಕೊಳೆಗೇರಿಯ ಹಾಡು' ಕವನದ ಈ ಸಾಲುಗಳನ್ನು ಗಮನಿಸಬಹುದು:

ಬಡವರ ಜೋಪಡಿ ನೆಲಸಮವಾದ
ನೋವಿನ ಕಥೆಕೇಳಿ
ದುಡಿಯುವ ಜನಗಳ ಪ್ರಾಣವು ಹೋದ
ಗೋಳಿನ ಕಥೆ ಕೇಳಿ
.......

ಸಣ್ಣ ಸಂಗತಿಗು ಕೂಗಾಡುವ ಕುಣಿಯುವ
ಹೆಂಗಸರಾ ಪಡೆ ಅಲ್ಲಿತ್ತು
ಮಾಜೀ ರೌಡಿಯ ಕುಂಟು ನಡಿಗೆಯಲಿ
ಪೋಲೀಸರ ಏಟಿನ ಗುರುತಿತ್ತು.

ಈ ಹಾಡಿನಲ್ಲಿ ವಿಷಾದವಿದೆ. ಗೋಳಿನ ಕಥೆಯಿದೆ. ಕೇವಲ ಇದೊಂದೇ ಹಾಡಿಗೆ ಸಂಬಂಧಿಸಿದ ಭಾವವಲ್ಲವಿದು. ಇಡೀ ಕವನ ಸಂಕಲನದಲ್ಲಿಯೇ ಈ ವಿಷಾದ ವ್ಯಾಪಿಸಿದೆ. ಇದು ಸ್ಪಷ್ಟವಾಗಿಯೂ ಕವಿಯ ಮನೋಧರ್ಮ ಮೆದುವಾಗುತ್ತಿರುವುದರ ಸೂಚನೆ.

ಕವಿಯಲ್ಲಾದ ಈ ಬದಲಾವಣೆಯನ್ನು ಅನೇಕರು ಅನೇಕ ರೀತಿಯಲ್ಲಿ ಅರ್ಥೈಸಿದ್ದಾರೆ. 'ಕವಿಯಾಗಿ ಸಿದ್ಧಲಿಂಗಯ್ಯನವರ ಸಾಧನೆ ಮುಗಿದುದರ ಸೂಚನೆಯಿದು' ಎಂದು ಅಭಿಪ್ರಾಯ ಪಟ್ಟವರೂ ಇದ್ದಾರೆ. ಆದರೆ ಕವಿ ಅನುಭಾವಿಯಾಗುತ್ತಿರುವ ಹಾಗೂ ಸಮಾಜವಾದಿಯಾಗುತ್ತಿರುವ ಸಂಕೇತವಿದು ಎಂದು ಅರ್ಥೈಸಿದರೆ ತಪ್ಪಾಗಲಾರದು.

**ಕೆಲವು ಅಪ್ರಕಟಿತ ಕವನಗಳು:** ಈಗಾಗಲೇ ಉಲ್ಲೇಖಿಸಿರುವ ಮೂರು ಸಂಕಲನಗಳ ಬಳಿಕ ಸಿದ್ಧಲಿಂಗಯ್ಯನವರ ಹೊಸ ಸಂಕಲನ ಪ್ರಕಟವಾಗಿಲ್ಲ. ಆದರೆ ನಾಡಿನ ಪ್ರಸಿದ್ಧ ಪತ್ರಿಕೆಗಳಲ್ಲಿ ಅವರ ಕವನಗಳು ಪ್ರಕಟವಾಗಿವೆ. ಇಂತಹ ಸುಮಾರು ಹದಿನೆಂಟು ಕವನಗಳು ನನ್ನ ಗಮನಕ್ಕೆ ಬಂದಿವೆ. ಶಬ್ದ, ಯುಗಾದಿ, ಈ ದೇವರುಗಳು, ಮೂರು ಮುಖ, ಹಂಬಲ, ಕನವರಿಕೆ, ಪ್ರೀತಿ ಮತ್ತು ಜ್ಯೋತಿಷ್ಯ, ಪಂಚ ನದಿಗಳ ಹಾಡು, ಪುರುಷಾರ್ಥ, ಬೆಂಜಮಿನ್ ಮೊಲಾಯಸ್, ವಿಜಯೋತ್ಸವ, ಕಾರ್ಲ್‌ಮಾರ್ಕ್ಸ್ ಮೊದಲಾದ ಶೀರ್ಷಿಕೆಯ ಕವನಗಳಿವು. ಈ ಅಪ್ರಕಟಿತ ಕವನಗಳಲ್ಲಿ 'ಕನವರಿಕೆ' ಕವನವೊಂದನ್ನು ಪ್ರಾತಿನಿಧಿಕವಾಗಿ ಚರ್ಚಿಸಬಹುದು.

ಭೂಮಿ ಆಕಾಶಗಳ ಅಂತರ ಅಳಿದು
ನಕ್ಷತ್ರಗಳ ಗೊಂಚಲಿಳಿಯಲೆಂದು
ಅಡವಿಯ ನಿದ್ದೆಯಲ್ಲಿ ನದಿ ಬಳುಕುವುದನ್ನು
ಸದಾ ನೋಡಲೆಂದು
ಅಪರಿಚಿತ ಕಣಿವೆಗಳಲ್ಲಿ ಪ್ರೀತಿಯ ಪ್ರವಾಹ ಉಕ್ಕಿ
ಭೀತಿಯ ಬಂಡೆಗಳು ಕರಗಲೆಂದು
ನನ್ನ ಕವಿತೆ ಕನವರಿಸುತ್ತದೆ.
ನಡುಹಗಲಿನಲ್ಲಿ ಕಲ್ಲು ಹೊತ್ತಿರುವ
ಸುಡುವ ನೆತ್ತಿಗೆ ಸಿಂಬೆಯಾಗಲೆಂದು

ಗುರುತು ಸಿಕ್ಕದ ಮಕ್ಕಳು ಗುನುಗಿ
ಹೆತ್ತವರಿಗೆ ನೆಪ್ಪಾಗಲೆಂದು
ಅಪರಾತ್ರಿಯಲ್ಲಿ ಕತ್ತು ಹಿಸುಕುವ ಕೈಗಳು
ಬೆಚ್ಚಿ ಕೆಳಗಿಳಿಯಲೆಂದು
ನನ್ನ ಕವಿತೆ ಹಂಬಲಿಸುತ್ತದೆ.
ಕಲ್ಲು ಕಟ್ಟಡದೆದುರು ಕೈಚೆಲ್ಲಿ ಕುಳಿತವರ
ನಿಟ್ಟುಸಿರು ಧಿಕ್ಕಾರವಾಗಲೆಂದು
ಒದೆತ ಹೊಡೆತಕ್ಕೆ ಸಿಕ್ಕಿ ಭೂಗತರಾದವರು
ಒಂದೇ ನೆಗೆತಕ್ಕೆ ಉತ್ತರ ಕೊಡಲೆಂದು
ಅಕ್ಷರಗಳ ಅಗ್ನಿಕುಂಡದಲ್ಲಿ
ಸಿಟ್ಟು ಧಗಧಗಿಸಿ ಉರಿಯುತ್ತಿರಲೆಂದು
ನನ್ನ ಕವಿತೆ ಹಾರೈಸುತ್ತದೆ.
ಸಭ್ಯ ಕೊಲೆಗಡುಕರನ್ನು
ಕಾನೂನುಬದ್ಧ ದರೋಡೆಕೋರರನ್ನು
ಗೌರವಸ್ಥ ಲಂಚಕೋರರನ್ನು
ಮೆಚ್ಚಿ ಎಲ್ಲರೂ ತಲೆಬಾಗುವಾಗ
ನನ್ನ ಕವಿತೆ ಮರುಗುತ್ತದೆ.
ಸನ್ಮಾನದ ಉನ್ಮಾದಕ್ಕೆ
ಸತ್ಯವಂತಿಕೆಯ ಪೊಳ್ಳು ಜಾಹಿರಾತುಗಳಿಗೆ
ಹಣದ ಥೈಲಿಯ ಸದ್ದುಗಳಿಗೆ
ಎಲ್ಲರೂ ದನಿಗೂಡಿಸುವಾಗ
ನನ್ನ ಕವಿತೆ ನಿಶ್ಶಬ್ದವಾಗುತ್ತದೆ.

'ಕಪ್ಪು ಕಾಡಿನ ಹಾಡು' ಕವನ ಸಂಕಲನದ ಅನಂತರದ ಕವನಗಳ ಲಕ್ಷಣವನ್ನು ಪ್ರತಿನಿಧಿಸುವ ಕವನವಿದು. ಇತರ ಕವನಗಳಲ್ಲಿಯೂ ಒಂದಲ್ಲ ಒಂದು ರೀತಿಯಲ್ಲಿ ಇಂತಹ ಮನೋಧರ್ಮವೇ ವ್ಯಕ್ತವಾಗುತ್ತದೆ.

**ಪಂಚಮ ಮತ್ತು ನೆಲಸಮ**: ಪಂಚಮ ಮತ್ತು ನೆಲಸಮ ಎರಡು ಪ್ರತ್ಯೇಕ ನಾಟಕಗಳು. ಆದರೆ ಇವೆರಡೂ ಒಂದೇ ಸಂಕಲನವಾಗಿ ಪ್ರಕಟಗೊಂಡಿವೆ.

'ಪಂಚಮ' ನಾಟಕವು ಒಂದು ಸಂದರ್ಶನದ ಮೂಲಕ ಆರಂಭವಾಗುತ್ತದೆ. ಸಂದರ್ಶಕ ಹಯವದನರಾವ್ ಅವರಲ್ಲಿಗೆ ಅನೇಕ ಮಂದಿ ದಲಿತರು ಸಂದರ್ಶನಕ್ಕಾಗಿ

ಬರುತ್ತಾರೆ. ಮುಂದೆ ಉದ್ಯೋಗಕ್ಕೆ ಸೇರಬಯಸುವ ದಲಿತ ಅಭ್ಯರ್ಥಿಗಳಿಗೆ ಪೂರ್ವಭಾವಿಯಾಗಿ ತರಬೇತಿ ಕೊಡಿಸುವ ಉದ್ದೇಶದಿಂದ ಈ ಸಂದರ್ಶನವನ್ನು ಸಿದ್ಧಪಡಿಸಲಾಗಿದೆ.

ಹೀಗೆ ಸಂದರ್ಶನಕ್ಕೆ ಬಂದ ಏಕೈಕ ಮಹಿಳಾ ಅಭ್ಯರ್ಥಿಗೆ ಮಕ್ಕಳ ಪೋಷಣೆಯ ಬಗೆಗೆ ಟ್ರೈನಿಂಗ್ ನೀಡಲು ಆಯ್ಕೆ ಮಾಡಲಾಗುತ್ತದೆ. ಡಿಗ್ರಿ ಮಾಡಿದ ನಾನು ಈಗಾಗಲೇ ಮಕ್ಕಳ ಪೋಷಣೆಯ ಬಗೆಗೆ ತಿಳುವಳಿಕೆ ಪಡೆದುಕೊಂಡಿರುವೆನೆಂದರೂ, ಇಲ್ಲ ಟ್ರೈನಿಂಗ್ ಆಗಲೇಬೇಕೆಂಬುದು ಅಧಿಕಾರಿಯ ಆದೇಶವಾಗುತ್ತದೆ. ಆಮೇಲೆ ಬರುವ ಅಭ್ಯರ್ಥಿಗಳಲ್ಲೊಬ್ಬ, ಅಧಿಕಾರಿಗೆ ತರಕಾರಿಯನ್ನು ಲಂಚವಾಗಿ ಕೊಟ್ಟು, ಕೆಲಸದ ಬಗೆಗೆ ಏನೂ ಭರವಸೆ ಪಡೆಯಲಾರದೆ ಹೋಗುತ್ತಾನೆ. ಮತ್ತೊಬ್ಬನನ್ನು ಅಧಿಕಾರಿಯು ರಾಜಕೀಯ ಸೇರುವಂತೆಯೂ ಇನ್ನೊಬ್ಬನನ್ನು ತನ್ನ ಸ್ನೇಹಿತನ ಮನೆಗೆ ಮುಸುರೆ ತಿಕ್ಕುವುದಕ್ಕಾಗಿಯೂ ಹೇಳಿ ಕಳುಹಿಸುತ್ತಾನೆ. ಕೊನೆಯಲ್ಲಿ ಬರುವ 'ಹೊಲೆಮಾದಿಗ' ಮಾತ್ರ ''ಈ ದೇಶದಲ್ಲಿ ಮಾನ ಮರ್ಯಾದೆಯಿಂದ ಬದುಕಬೇಕು ಅನ್ನೋ ಆಸೆ ಇದ್ರೆ ಎಲ್ಲಾ ಹೊಲೆಮಾದಿಗ್ರು ಕೂಡ ಇದನ್ನೇ ಮಾಡಬೇಕು'' ಎಂದು ಅಧಿಕಾರಿಯನ್ನು ಚೆನ್ನಾಗಿ ಥಳಿಸುತ್ತಾನೆ.

'ನೆಲಸಮ' ನಾಟಕದ ವಸ್ತು ಕೊಳಚೆ ನಿರ್ಮೂಲನ ಕಾರ್ಯಕ್ಕೆ ಸಂಬಂಧಿಸಿದುದು. ಚಂದ್ರಮ್ಮ ರಾಣಿಯ ಮಗ ವಿಜಯ ಅರಮನೆಯಿಂದ ಹೊರಗೆ ಬರುವಾಗ ಅವನ ಮೂಗಿಗೆ ಏನೋ ವಾಸನೆ ಬಡಿಯುತ್ತದೆ. ಈ ವಾಸನೆಯ ಮೂಲವೆಲ್ಲಿದೆ ಎಂದು ತಿಳಿದುಕೊಂಡು ಬರಲು ಆಳುಗಳನ್ನು ಕಳುಹಿಸುತ್ತಾನೆ. ಈ ವಾಸನೆ ಪಕ್ಕದ ಕೊಳೆಗೇರಿಯಿಂದ ಬರುತ್ತಿರುವುದಾಗಿ ತಿಳಿದು ಬರುತ್ತದೆ.

ವಿಜಯ ಈ ವಿಷಯವನ್ನು ರಾಣಿಯೂ ತನ್ನ ತಾಯಿಯೂ ಆದ ಚಂದ್ರಮ್ಮನಿಗೆ ತಿಳಿಸುತ್ತಾನೆ. ಭಾರತದ ಸೌಂದರ್ಯವನ್ನು ಕಾಪಾಡಲು, ಶ್ರೀಮಂತರು ಆರೋಗ್ಯದಿಂದಿರಲು, ವಿಜಯನ ಮೂಗುಳಿಯಲು ಕೊನೆಗೂ ಅಲ್ಲಿಯ ಗುಡಿಸಿಲುಗಳನ್ನು ನಾಶ ಮಾಡಲಾಗುತ್ತದೆ.

ಡಾ. ಜಿ. ಎಸ್. ಶಿವರುದ್ರಪ್ಪನವರು ಈ ನಾಟಕಗಳನ್ನು ಕುರಿತು ಈ ರೀತಿಯಾಗಿ ಅಭಿಪ್ರಾಯಿಸಿದ್ದಾರೆ:

''.........ಬೆನ್‌ಕಾರ್ಡ್‌ವೆಲ್‌ನ 'ಜಾಬ್' ನಾಟಕದ ತಂತ್ರವನ್ನು ಅನುಸರಿಸಿ ರಚಿಸಲಾಗಿರುವ 'ಪಂಚಮ'ದಲ್ಲಿ ಹರಿಜನೋದ್ಧಾರ ಮಂಡಳಿಯವರು ಉದ್ಯೋಗಕ್ಕಾಗಿ ನಡೆಸುವ ಸಂದರ್ಶನವೊಂದನ್ನು ಕಲ್ಪಿಸಲಾಗಿದ್ದೂ, ಅಲ್ಲಿ ಬರುವ ಅಭ್ಯರ್ಥಿಗಳ ಮೂಲಕ ವಿದ್ಯಾವಂತ ಹರಿಜನರ ವಿವಿಧ ಧೋರಣೆಗಳನ್ನು ಮಾರ್ಮಿಕವಾಗಿ ವಿಶ್ಲೇಷಿಸಿದ್ದಾರೆ. ರಂಗ ಸೂಚನೆಗಳನ್ನು ಪಾತ್ರ ಪರಿಚಯಕ್ಕಾಗಿ ಬಳಸಿರುವ ವಿಧಾನ ಅರ್ಥಪೂರ್ಣವಾಗಿದೆ. ನಾಟಕ ನಿರ್ದೇಶನಕ್ಕೆ ಇದರಿಂದ ಒಳ್ಳೆಯ ಸೂಚನೆಗಳು ಸಿಗುತ್ತವೆ. ನಾಟಕದ ಆರಂಭದಿಂದಲೂ ಹಾಸ್ಯ ಮತ್ತು ವ್ಯಂಗ್ಯದ

ಶೈಲಿಯನ್ನೇ ಅಳವಡಿಸಿಕೊಂಡಿದ್ದು ಮುಕ್ತಾಯದ ರೋಷದ ತಿರುವು ಪರಿಣಾಮಕಾರಿಯಾಗಿ ಮೂಡಿ ಬಂದಿಲ್ಲವೆನಿಸುತ್ತದೆ. ಸಂದರ್ಶಕ ಅಧಿಕಾರಿಯನ್ನು ಆಫೀಸಿನ ತುಂಬಾ ಓಡಾಡಿಸಿಕೊಂಡು ತನ್ನ ತಂಬೂರಿಯಿಂದ ಒಡೆದು ಚುಚ್ಚುವ ಅಭ್ಯರ್ಥಿಯ ಕ್ರಿಯೆ ಪ್ರೇಕ್ಷಕರ ನಗೆಯ ಪ್ರತಿಕ್ರಿಯೆಯನ್ನು ತರುವಂತಾಗುವುದು ಅಲ್ಲಿನ ಮಾತುಗಳಿಂದ ಅನಿವಾರ್ಯವಾಗುತ್ತದೆ.

'ಪಂಚಮ'ಕ್ಕಿಂತ ''ನೆಲಸಮ'' ಈ ದಿಸೆಯಲ್ಲಿ ಪಡೆದಿರುವ ಯಶಸ್ಸು ಗಮನಾರ್ಹವಾದುದು. 'ಪಂಚಮ'ದ ಕ್ರಾಂತಿಕಾರಿಯ ಗೆಲುವಿಗಿಂತ ''ನೆಲಸಮ''ದ ದಲಿತರ ದುರಂತ ಆಳವಾಗಿ ಮನಸ್ಸಿನಲ್ಲಿ ಬೇರೂರುತ್ತದೆ. ಸಮಕಾಲೀನ ಘಟನೆಯೊಂದನ್ನು ಆಧರಿಸಿ ರಚಿಸಲಾಗಿರುವ ಈ ನಾಟಕದ ಪಾತ್ರ ಪರಿಪೋಷಣೆ ಮತ್ತು ಸಂಭಾಷಣೆಗಳಲ್ಲಿ ಯಕ್ಷಗಾನ ಸಂಪ್ರದಾಯದ ಧಾಟಿಯನ್ನು ಯಶಸ್ವಿಯಾಗಿ ಅಳವಡಿಸಿಕೊಂಡಿದ್ದಾರೆ. ಅಲ್ಲಿನ ಹಾಡುಗಳು ಭಾವತೀವ್ರತೆಯಿಂದ ಕೂಡಿದ್ದು ದಲಿತರ ನೋವನ್ನು ಪರಿಣಾಮಕಾರಿಯಾಗಿ ಮೂಡಿಸುತ್ತವೆ. ಜಾತಿ ಹೋರಾಟ ವರ್ಗ ಹೋರಾಟದಂತಹ ಸಮಕಾಲೀನವಾದ ಜ್ವಲಂತ ಸಮಸ್ಯೆಗಳನ್ನು ವಸ್ತುವಾಗಿಸಿಕೊಳ್ಳುವ ಲೇಖಕನು ಎದುರಿಸಬೇಕಾಗುವ ವಿಶಿಷ್ಟ ಸವಾಲುಗಳನ್ನು ಸಿದ್ಧಲಿಂಗಯ್ಯನವರು ಅರಿತಿದ್ದಾರೆ..... ಈ ಬಗೆಯ ನಿರ್ಲಿಪ್ತ ಆರೋಗ್ಯಕರ ಧೋರಣೆಗಳನ್ನು ಕಾಪಾಡಿಕೊಂಡು ಬರಲು ಸಾಧ್ಯವಾದರೆ ಸಿದ್ಧಲಿಂಗಯ್ಯನವರಿಂದ ಕನ್ನಡ ರಂಗಭೂಮಿ ಇನ್ನೂ ಶ್ರೇಷ್ಠ ಕೃತಿಗಳನ್ನು ನಿರೀಕ್ಷಿಸಬಹುದಾಗಿದೆ.''

**ಏಕಲವ್ಯ:** ಈ ನಾಟಕ ೧೯೮೬ ರಲ್ಲಿ ಪ್ರಕಟವಾಯಿತು. ಹೆಸರೇ ಹೇಳುವಂತೆ ಮಹಾಭಾರತದ ಏಕಲವ್ಯನಿಗೆ ಸಂಬಂಧಿಸಿದ ಕತೆಯಿದು. ಈ ಕತೆಯನ್ನು ಹೀಗೆ ಸಂಗ್ರಹಿಸಬಹುದು.

ತಾಯಿಯ ಸಲಹೆಯ ಮೇರೆಗೆ ಏಕಲವ್ಯ ದ್ರೋಣಾಚಾರ್ಯರಲ್ಲಿ ಬಿಲ್ವಿದ್ಯೆಯನ್ನು ಕಲಿಯುವುದಕ್ಕಾಗಿ ಹಸ್ತಿನಾವತಿಗೆ ಹೋಗುತ್ತಾನೆ. ಆದರೆ ದ್ರೋಣಾಚಾರ್ಯರು ಆತ ಕೀಳುಕುಲದವನೆಂದು ಸಮ್ಮತಿಸದೆ ಹಿಂದಕ್ಕಟ್ಟುತ್ತಾರೆ. ಆಗ ಏಕಲವ್ಯ ದ್ರೋಣನ ಮಣ್ಣಿನ ಮೂರ್ತಿಯನ್ನು ಮಾಡಿ, ಅದರ ಸ್ಫೂರ್ತಿಯಿಂದ ಬಿಲ್ವಿದ್ಯೆಯಲ್ಲಿ ಪ್ರವೀಣನಾಗುತ್ತಾನೆ.

ಮುಂದೆ ಅರ್ಜುನನೇ ಮೊದಲಾದ ಕ್ಷತ್ರಿಯ ಕುಮಾರರು ಬೇಟೆಗೆ ಬಂದಾಗ ಅವರ ಬೇಟೆನಾಯಿಯ ಬಾಯಿಗೆ ಏಕಲವ್ಯ ಬಾಣ ಬಿಡುತ್ತಾನೆ. ಇಂತಹ ಕೌಶಲ್ಯ ಶಬ್ದವೇದಿ ವಿದ್ಯೆ ಗೊತ್ತಿದ್ದವರಿಗೆ ಮಾತ್ರ ಕೈವಶವಾಗುವಂಥದ್ದು. ಇದು ರಾಜಕುಮಾರರಿಗೆ ತಿಳಿದಾಗ ಅವರು ದ್ರೋಣನಿಗೆ ದೂರುತ್ತಾರೆ. ದ್ರೋಣಾಚಾರ್ಯ ಈಗಾಗಲೇ ಅರ್ಜುನನ್ನು ಶ್ರೇಷ್ಠ ಬಿಲ್ಲುಗಾರನನ್ನಾಗಿ ಮಾಡುತ್ತೇನೆಂದು ಅವನಿಗೆ ಮಾತು ಕೊಟ್ಟಿದ್ದ. ಆದರೆ ಏಕಲವ್ಯನಿಗೆ ಈ ಕೌಶಲ್ಯ ದಕ್ಕಿರುವುದಕ್ಕೆ ಕರುಬಿದ ಅರ್ಜುನ ಇದನ್ನು ಆಕ್ಷೇಪಿಸುತ್ತಾನೆ. ಇದರಿಂದಾಗಿ ದ್ರೋಣಾಚಾರ್ಯ ಏಕಲವ್ಯನ ಬಲಗೈಯ ಹೆಬ್ಬೆರಳನ್ನು ದಕ್ಷಿಣೆಯಾಗಿ ಪಡೆಯುತ್ತಾನೆ.

ಹೀಗಿರಲು ಕುರುಕ್ಷೇತ್ರ ಯುದ್ಧದ ಸಿದ್ಧತೆಯಾಗುತ್ತದೆ. ಆಗ ಪಾಂಡವರು ಮತ್ತು ಕೌರವರು ಏಕಲವ್ಯನನ್ನು ತಮಗೆ ನೆರವಾಗಲು ಕೇಳುತ್ತಾರೆ. ಏಕಲವ್ಯ ಅವರೀರ್ವರನ್ನು ತಿರಸ್ಕರಿಸಿ ಕುರುಪಾಂಡವರೀರ್ವರ ವಿರುದ್ಧವೂ ತಾನು ಹೋರಾಟ ಮಾಡುತ್ತೇನೆಂದು ನಿರ್ಧರಿಸುತ್ತಾನೆ.

ಈ ನಾಟಕದ ಬಗೆಗೆ ಡಾ. ಕೆ. ಮರುಳಸಿದ್ಧಪ್ಪನವರು ಹೀಗೆ ಬರೆಯುತ್ತಾರೆ:

‘‘.......... ಸಿದ್ಧಲಿಂಗಯ್ಯನವರ ನಾಟಕ ಆರಂಭವಾಗುವುದೇ ಕುರುಕ್ಷೇತ್ರದ ಯುದ್ಧದ ಹಿನ್ನೆಲೆಯಲ್ಲಿ ಜೂಜಿನ ಹುಚ್ಚಿಗಾಗಿ ಕೈ ಹಿಡಿದ ಮಡದಿಯನ್ನು ಪಣವಿಟ್ಟು ವೈರದಿಂದ ಪರಸ್ಪರ ಅಣ್ಣ ತಮ್ಮಂದಿರೇ ಕಚ್ಚಾಡಿ ಗುರು-ಶಿಷ್ಯ, ತಂದೆ-ಮಕ್ಕಳು, ಅಣ್ಣ ತಮ್ಮಂದಿರೇ ಕತ್ತಿ ಹಿಡಿದು ಹೋರಾಡುತ್ತಿರುವ ನಾಗರಿಕ ಕ್ರೌರ್ಯದ ಹಿನ್ನೆಲೆಯಲ್ಲಿ ಪರ್ಯಾಯವೆಂಬಂತೆ ಕಾಡಿದ ಮುಗ್ಧ ಬೇಡನ ಕಥೆ ತೆರೆದುಕೊಳ್ಳುತ್ತದೆ. ಹೀಗೆ ನಾಟಕದ ಆರಂಭದಲ್ಲಿಯೇ ಈ ಪುರಾಣ ಕಥೆಯ ಮೂಲಕ ತಾವು ಪ್ರತಿಪಾದಿಸಲಿರುವ ಸಾಮಾಜಿಕ ಸಂದೇಶವನ್ನು ನಾಟಕಾರರು ಸ್ಪಷ್ಟಪಡಿಸಿದ್ದಾರೆ. ನಾಗರಿಕರ ಕಲಿತ ವಿದ್ಯೆ ಹೇಗೆ ಅಪವ್ಯಯವಾಗುತ್ತದೆ, ಅವರ ಶಸ್ತ್ರಾಸ್ತ್ರ ನೈಪುಣ್ಯತೆ ದಾಯಾದಿಗಳ ಕಗ್ಗೊಲೆಗೆ, ಬಂಧು ಹತ್ಯೆಗೆ, ಅಸಂಖ್ಯಾತ ಅಂಗವಿಕಲತೆಗೆ, ಅಗಣಿತ ವೈಧ್ಯವ್ಯಕ್ಕೆ ಹೇಗೆ ಕಾರಣವಾಗುತ್ತದೆ ಎಂಬುದು ನಾಟಕದಲ್ಲಿ ಮತ್ತೆ ಮತ್ತೆ ಪ್ರಸ್ತಾಪಗೊಳ್ಳುತ್ತದೆ. ಕೇವಲ ವೈಯಕ್ತಿಕ ನೆಲೆಯಿಂದ ಹುಟ್ಟಿದ ಅಭಿಮಾನ, ಛಲ ಮತ್ತು ಹೊಟ್ಟೆಕಿಚ್ಚಿನಿಂದಾಗಿ ಸಂಭವಿಸಿದ ಮಹಾಭಾರತದ ಯುದ್ಧ ಇದಾವುದಕ್ಕೆ ಸಂಬಂಧವಿಲ್ಲದ ಸಾವಿರಾರು ಸೈನಿಕರನ್ನು ಬಲಿ ತೆಗೆದುಕೊಳ್ಳುವ ಬಗೆಗೆ ನಾಟಕಕಾರರಲ್ಲಿ ತಿರಸ್ಕಾರವಿದೆ. ಆದರೆ ಏಕಲವ್ಯನು ಸಾಧಿಸ ಹೊರಟ ಬಿಲ್ವಿದ್ಯೆ ಲೋಕ ಕಲ್ಯಾಣಕ್ಕಾಗಿ, ತನ್ನ ಕಾಡಿನ ರಕ್ಷಣೆಗಾಗಿ ಮೀಸಲಾದ ವಿದ್ಯೆ. ಪಾತ್ರಾಪಾತ್ರರನ್ನು ನೋಡಿ ವಿದ್ಯೆಯನ್ನು ಕಲಿಸಬೇಕೆನ್ನುವ ನಂಬಿಕೆಯಿರುವ ಹಿಂದೂ ಪರಂಪರೆಯಲ್ಲಿ ಕ್ಷತ್ರಿಯರಿಗೂ ಬೇಡರಿಗೂ ಇರುವ ಈ ವ್ಯತ್ಯಾಸ ವ್ಯಂಗ್ಯ ಪೂರ್ಣವಾಗಿದೆ.....:...

ಬಲಗೈ ಹೆಬ್ಬೆರಳನ್ನು ಕತ್ತರಿಸಿ ಕೊಟ್ಟ ಏಕಲವ್ಯನು ಮುಂದೆ ಎಡಗೈಯಲ್ಲಿ ಬಿಲ್ಲು ಹಿಡಿದು ಕ್ರಾಂತಿಯ ದುಂದುಭಿ ಮೊಳಗಿಸಿದನೆಂಬ ನಾಟಕಕಾರರ ಕಲ್ಪನೆ ಧ್ವನಿಪೂರ್ಣವಾಗಿದೆ. ಮುಂದೆ ಕುರುಕ್ಷೇತ್ರದ ಯುದ್ಧ ನಡೆದಾಗ ಏಕಲವ್ಯನು ಕೌರವ ಪಕ್ಷದಲ್ಲಿದ್ದು ಕಾದಿದನೆಂಬ ಪುರಾಣ ಕಥೆಯನ್ನು ಸಿದ್ಧಲಿಂಗಯ್ಯನವರು ಬದಲಾಯಿಸಿಕೊಂಡಿದ್ದಾರೆ. ಮಹಾಭಾರತದ ಯುದ್ಧಕ್ಕೆ ಸಂಬಂಧಿಸಿದಂತೆ ಕಾದಾಡಲು ಅಥವಾ ತಟಸ್ಥವಾಗಿರಲು ಅವನು ಮಾಡಿಕೊಳ್ಳುವ ಆಯ್ಕೆ ಸಾಮಾಜಿಕ ನೆಲೆಯಿಂದಲೂ ತರ್ಕಬದ್ಧವಾಗಿರುವಂತೆ ನೋಡಿಕೊಳ್ಳುವ ಮೂಲಕ ಸಿದ್ಧಲಿಂಗಯ್ಯನವರು ತಮ್ಮ ಸ್ವಂತಿಕೆಯನ್ನು ತೋರ್ಪಡಿಸಿದ್ದಾರೆ. ನಾಟಕದ ಕೊನೆಯ ಮೂರು ದೃಶ್ಯಗಳ ಕಲ್ಪನೆ ಈ ದೃಷ್ಟಿಯಿಂದ ಅನಿವಾರ್ಯವಾಗಿದೆಯಾದರೂ ಉಳಿದ ಭಾಗದೊಡನೆ ಈ ಮೂರು ದೃಶ್ಯಗಳ ಸಂಯೋಗ ಸಾರ್ಥಕವಾದ ರೀತಿಯಲ್ಲಿ ಏಕೀಭವಿಸಿಲ್ಲವೆನಿಸುತ್ತದೆ. ಕೌರವ ಪಾಂಡವರಿಬ್ಬರೂ ಯುದ್ಧಕ್ಕೆ ಮುನ್ನ ಏಕಲವ್ಯನ ಬೆಂಬಲ ಬಯಸಿ ಆತನೆಡೆಗೆ ಹೋದಾಗ

ಅವನು ಹೇಳುವ ಮಾತುಗಳು ಸಂಪೂರ್ಣವಾಗಿ ಸಮಕಾಲೀನ ನೆಲೆಯಿಂದ ನಾಟಕಕಾರರು ಹೇಳುವ ಮಾತುಗಳಾಗಿವೆ. 'ಕುರುಕ್ಷೇತ್ರ ಕೇವಲ ಉಳ್ಳವರ ನಡುವಿನ ಕಚ್ಚಾಟ, ನನ್ನದು ಇಲ್ಲದವರ ಪರವಾದ ಹೋರಾಟ. ಈ ಸಂಘರ್ಷಕ್ಕೆ ಕುರು ಪಾಂಡವರಿಬ್ಬರ ವಿರುದ್ಧವೂ ಸಾಗಬೇಕು' ಎಂಬ ಏಕಲವ್ಯನ ಸಂದೇಶದೊಂದಿಗೆ ನಾಟಕ ಮುಕ್ತಾಯ ವಾಗುತ್ತದೆ........''

**ಹಕ್ಕಿನೋಟ**: ಇದು ಸಿದ್ಧಲಿಂಗಯ್ಯನವರ ಲೇಖನಗಳ ಸಂಗ್ರಹ. ಇದು ೧೯೯೦ ರಲ್ಲಿ ಮೊದಲ ಬಾರಿಗೆ ಪ್ರಕಟವಾಯಿತು. ೧. ಸಾಹಿತ್ಯಾಭಿವ್ಯಕ್ತಿಯಲ್ಲಿ ಸಾಮಾನ್ಯ ಮನುಷ್ಯ. ೨. ಕ್ರಾಂತಿಕಾವ್ಯ, ಜನಪದೀಕರಣ. ೩. ಸಾಹಿತ್ಯ ಮತ್ತು ಮಾನವೀಕರಣ. ೪.ದಲಿತ ಸಾಹಿತ್ಯ. ೫. ನಿರಂಜನ 'ಚಿರಸ್ಮರಣೆ'. ೬. ಕರಗ ಸಂಪ್ರದಾಯ ಮತ್ತು ಆಚರಣೆಗಳು. ೭. ಕೆಲವು ಆರಾಧನೆಗಳು ಮತ್ತು ಆಚರಣೆಗಳು. ೮. ಅಸ್ಪೃಶ್ಯತೆ ಮತ್ತು ಸಮಾಜದ ಹೊಣೆಗಾರಿಕೆ. ೯. ದಲಿತ ಸಂಸ್ಕೃತಿ. ೧೦. ವಚನ ಚಳುವಳಿ ಮತ್ತು ದಲಿತರು. ೧೧. ಬಂಡಾಯ ಕವಿ ಡೇವಿಡ್ ಡಿಯೋಪ್. ೧೨. ಕನಕದಾಸರ ಸಾಮಾಜಿಕ ಆಶಯಗಳು. ೧೩. ಕೈವಾರ ತಾತಯ್ಯನ ವೈಶಿಷ್ಟ್ಯ ಮುಂತಾದ ಲೇಖನಗಳಿವೆ.

ಪ್ರಸ್ತುತ ಕೃತಿಯ ಬಗೆಗೆ ಶ್ರೀ ಓ. ಎಲ್. ನಾಗಭೂಷಣ ಸ್ವಾಮಿಯವರ ಅಭಿಪ್ರಾಯಗಳನ್ನು ಹೀಗೆ ಸಂಗ್ರಹಿಸಲಾಗಿದೆ.

'ಸಿದ್ಧಲಿಂಗಯ್ಯನವರು ಸಾಹಿತ್ಯವನ್ನು ಮಾನವೀಕರಣದ ಒಂದು ಮಾಧ್ಯಮವಾಗಿ ಪರಿಗಣಿಸುತ್ತಾರೆ. ಈ ಪ್ರಕ್ರಿಯೆ ತುಳಿತಕ್ಕೆ ಒಳಗಾದವರಿಂದ ಆರಂಭವಾಗಬೇಕು ಎನ್ನುವುದು ಅವರ ನಿಲುವು. ಮೇಲುವರ್ಗದ ಮೌಲ್ಯಗಳು ದಲಿತರನ್ನು ನಿಸ್ತೇಜಗೊಳಿಸುವ ಸಾಧ್ಯತೆಯಿರುವುದರಿಂದ ದಲಿತ ಸಂಸ್ಕೃತಿಯ ಶೋಧನೆ ಅನಿವಾರ್ಯವಾದುದು ಎಂಬುದು ಅವರ ಖಚಿತ ಧೋರಣೆ. ದಲಿತರ ಮತ್ತು ಜನ ಸಾಮಾನ್ಯರ ಬದುಕಿನಲ್ಲಿ ಬೆರೆತಿರುವ ಆಚರಣೆಗಳ ಬಗೆಗೆ ಆಸಕ್ತಿಯಿರುವವರಿಗೆ ಇದೊಂದು ಉಪಯುಕ್ತ ಕೃತಿಯಾಗಿದೆ. ವಿಶ್ವವಿದ್ಯಾಲಯಗಳ ಸಮಾಜಶಾಸ್ತ್ರ ವಿಭಾಗಗಳ ಮಂದಿ ನಮ್ಮ ಸಮಾಜದ ಪ್ರಕ್ರಿಯೆಗಳ ಬಗೆಗೆ ಕನ್ನಡ ಜನರಲ್ಲಿ ತಿಳುವಳಿಕೆಯನ್ನು ಬೆಳೆಸಲು ವಿಫಲವಾಗಿರುವುದರಿಂದ ಇಂತಹ ಪುಸ್ತಕಗಳು ಮಹತ್ತ್ವವಾಗುತ್ತವೆ. ಅಂಬೇಡ್ಕರ್, ಮಾರ್ಕ್ಸ್‌ರ ಸಿದ್ಧಾಂತಗಳಲ್ಲದೆ ತಮ್ಮ ಸ್ವಂತ ಅನುಭವದ ಮೂಲಕವೂ ಸಿದ್ಧಲಿಂಗಯ್ಯ ಈ ವಿಚಾರಗಳನ್ನು ಮಂಡಿಸಿದ್ದಾರೆ.'

**ಅವತಾರಗಳು** : ಇದು ಪ್ರಬಂಧಗಳ ಸಂಕಲನ. ಮೇಲ್ನೋಟಕ್ಕೆ ಲಲಿತ ಪ್ರಬಂಧಗಳ ಮಾದರಿಯಲ್ಲಿ ಕಾಣುವ ಈ ಕೃತಿ ಸಿದ್ಧಲಿಂಗಯ್ಯನವರ ವೈಚಾರಿಕ ಕೃತಿಯೂ ಆಗಿದೆ. ದೇವರು, ಮೂಢನಂಬಿಕೆಗಳನ್ನು ತೀಕ್ಷ್ಣವಾಗಿ ಒರೆಗಲ್ಲಿಗೆ ಹಚ್ಚುವ ಈ ಕೃತಿ ಜಾನಪದ ಅಧ್ಯಯನದ ಮಾದರಿಯನ್ನು ಹೋಲುವುದಾದರೂ ತರ್ಕದಲ್ಲಿ ವಸುದೇವ ಭೂಪಾಲಂ ಅವರ 'ದೇವರು ಸತ್ತ' ಕೃತಿಯ ಮಾದರಿಯದು. ತಮಿಳುನಾಡಿನ ಪೆರಿಯಾರರನ್ನೂ ನೆನಪಿಗೆ ತರುವ ಇಲ್ಲಿನ 'ಸುಂದರ ಪ್ರಬಂಧಗಳು ಸಮಾಜದ

ಕುರೂಪವನ್ನು ಅತ್ಯಂತ ಮನಮುಟ್ಟುವಂತೆ ಚಿತ್ರಿಸಬಲ್ಲವು ಕೂಡ. ಬಹುತೇಕ ಸಿದ್ಧಲಿಂಗಯ್ಯನವರ ಜಾನಪದ ಕ್ಷೇತ್ರಕಾರ್ಯದ ಅನುಭವಗಳಾಗಿಯೂ ಇವು ಕಾಣಿಸಿಕೊಳ್ಳುವ ಮೂಲಕ ಒಬ್ಬ ಸಮಾಜಶಾಸ್ತ್ರಜ್ಞನ ಕುರುಹುಗಳಾಗಿಯೂ ವ್ಯಕ್ತವಾಗುತ್ತದೆ.

# ಕೃತಿಗಳ ಕುರಿತು

ಸಿದ್ಧಲಿಂಗಯ್ಯನವರ ಕೃತಿಗಳ ಬಗೆಗೆ ಈ ಹಿಂದಿನ ಅಧ್ಯಾಯದಲ್ಲಿ ಪರಿಚಯಿಸಲಾಯಿತು. ಪ್ರಸ್ತುತ ಅಧ್ಯಾಯದಲ್ಲಿ ಅವರ ಕಾವ್ಯ ಸ್ವರೂಪವನ್ನು ಗ್ರಹಿಸಲು ಹಿನ್ನೆಲೆಯಾಗಿ ಕೆಲವೊಂದು ಅಂಶಗಳನ್ನು ಪರಿಗಣಿಸಲಾಗುವುದು. ಸಿದ್ಧಲಿಂಗಯ್ಯನವರ ಕಾವ್ಯ ನಮ್ಮ ಕಾವ್ಯ ಪರಂಪರೆಯನ್ನೇ ಅಲುಗಾಡಿಸಿದ ಶಕ್ತಿಯನ್ನು ಪಡೆದುಕೊಂಡಿರುವಂತಹದ್ದು ಎಂದು ಈ ಮೊದಲೇ ಹೇಳಿದೆ. 'ಕಾವ್ಯಂ ಆನಂದಾಯ' ಎನ್ನುವ ನಮ್ಮ ಭಾರತೀಯರ, ಅಷ್ಟೇಕೆ, ಪಾಶ್ಚಾತ್ಯ ಸಾಂಪ್ರದಾಯಿಕ ದೃಷ್ಟಿಕೋನವನ್ನೇ ಮೊತ್ತಮೊದಲ ಬಾರಿಗೆ ಅಲುಗಾಡಿಸಿದ ಚಾರಿತ್ರಿಕ ಶಕ್ತಿ ಈ ಕವನಗಳಿಗಿದೆ.

ಇಲ್ಲಿಯವರೆಗೆ ಕಾವ್ಯವನ್ನು ಒಂದು 'ಆಸ್ವಾದನೆ' ಎಂದು ನಂಬಿದ್ದ ಮನೋಭಾವವನ್ನು ಬದಲಾಯಿಸಿ ಅದೊಂದು ಕ್ರಿಯೆ ಎನ್ನುವ 'ಹೊಸ ದಿಗಂತ'ವನ್ನೂ ಈ ಕಾವ್ಯದ ಮೂಲಕ ಸಿದ್ಧಲಿಂಗಯ್ಯ ತೋರಿಸಿದರು ಎಂಬ ಬಗ್ಗೆ ಎರಡು ಮಾತಿಲ್ಲ. ಈ ಹಿನ್ನೆಲೆಯಲ್ಲಿ ಅವರ ಕಾವ್ಯದ ಒಟ್ಟು ಬೆಳವಣಿಗೆಯನ್ನು ಗಮನಿಸುತ್ತ ಹೋದರೆ 'ಹೊಲೆಮಾದಿಗರ ಹಾಡಿ' ನಿಂದ 'ಕಪ್ಪು ಕಾಡಿನ'ವರೆಗೆ ಆಂತರಿಕವಾಗಿ ಸೂಕ್ಷ್ಮವಾದ ಬದಲಾವಣೆಗಳಾಗಿರುವುದೂ ಕಂಡುಬರುತ್ತದೆ. ಆ ಬರವಣಿಗೆಯನ್ನು 'ಸಾಮೂಹಿಕದಿಂದ ವೈಯಕ್ತಿಕ'ದೆಡೆಗೆ ಎಂದು ಇಲ್ಲಿ ಗುರುತಿಸಲಾಗಿದೆ. ಈ ಪರಿಕಲ್ಪನೆಯ ಗೃಹೀತಗಳಿಷ್ಟು.

ಅವರ ಮೊದಲ ಸಂಕಲನದಲ್ಲಿಯ ಕವನಗಳು ಒಂದು ಸಮೂಹದ ಧ್ವನಿಯಾಗಿಯೇ ಕಾಣಿಸಿಕೊಳ್ಳುತ್ತವೆ. ಅದನ್ನು ಸರಳೀಕರಿಸಿ ಹೇಳುವುದಾದರೆ 'ಸಮೂಹವಾಚಕ' ಪದಪ್ರಯೋಗ ಆ ಕವನಗಳಲ್ಲಿ ಕಂಡು ಬರುತ್ತದೆ. ಉದಾಹರಣೆಗೆ: 'ನನ್ನ ಜನಗಳು', (ನನ್ನ ಜನಗಳು) ಇಕ್ರಲಾ (ಒಂದು ಪದ) ಗುಡಿಸಲುಗಳು, (ಕ್ರಾಂತಿಪದ) ದಲಿತರಾಗ (ಕ್ರಾಂತಿಪದ) ದಲಿತರ (ಹಬ್ಬ) ಬರ್ರಲಾ (ಹಣೆ ಬರಹವು ಎಂಬ ನಾಟಕ) ನಾವು, (ನಾವು) ಸಾವಿರಾರು ನದಿಗಳು (ಸಾವಿರಾರು ನದಿಗಳು) ನಮ್ಮ (ಬೆಲ್ಚಿಯ ಹಾಡು) ಅವರು (ಕೆಂಪು ಸೂರ್ಯ) ಬರುವರು, (ದಲಿತರು ಬರುವರು) ಮನೆಗಳು (ಬಿದ್ದಾವು ಮನೆಗಳು ) ಯೇಳ್ತೀವಿ (ಕರಾಳ ರಾಣಿಯ ಕತೆ) ಚಿಂದಿ ಬಟ್ಟೆಗಳು (ಕಂಡೆ ನನ್ನವಳ ಒಂದು ದಿವಸ) ಕುಂತ ಮನೆಗಳೆ, (ಹೋರಾಟವೆ ದಾರಿ) ನಾವುಗಳು (ಚೋಮನ ಮಕ್ಕಳ ಹಾಡು) ಧಿಕ್ಕಾರಗಳ (ಮೆರವಣಿಗೆ) ಹುಲಿಗಳು (ಬಂದಿರುವವರು ಹುಲಿಗಳಾಗಿ) ಊರು (ಅಲ್ಲೇ ಕುಂತವರೆ)- ಇತ್ಯಾದಿ. ಇವಕ್ಕೆ ಇನ್ನೂ ವಿಪುಲವಾದ ಉದಾಹರಣೆಗಳನ್ನು ಅಲ್ಲಿಂದ ಕೊಡಬಹುದು. ಅಂದರೆ ಇಂತಹ ಕವನಗಳು ಒಂದು

ಸಮೂಹವನ್ನು ನಿರ್ದೇಶಿಸುತ್ತಲೋ ಅಥವಾ ಸಮೂಹದ ಪ್ರತಿನಿಧಿ ಧ್ವನಿಗಳಾಗಿಯೋ ಬರುತ್ತವೆ. 'ಹೊಲೆಮಾದಿಗರ ಹಾಡು' ಮತ್ತು ಸಾವಿರಾರು ನದಿಗಳು ಸಂಕಲನದಲ್ಲಿಯ ಹಾಡುಗಳು ಈ ಮಾದರಿಯವು. ಆದರೆ ' ಕಪ್ಪು ಕಾಡಿನ ಹಾಡು' ಸಂಕಲನದ ಕವನಗಳು ಇದಕ್ಕಿಂತ ಸಂಪೂರ್ಣವಾಗಿ ಭಿನ್ನ. ಅವುಗಳಲ್ಲಿ ವೈಯಕ್ತಿಕತೆಯೇ ಹೆಚ್ಚು. ಮೇಲಿನ ಉದಾಹರಣೆಯ ಮಾದರಿಯಲ್ಲಿಯೇ ಮುಂದುವರಿಯುವುದಾದರೆ ನನ್ನ (ನನ್ನ ಕವನ) ನನಗೆ (ಬೆಂಗಳೂರಿನ ಹಾಡು) ನಿನ್ನ (ಸುಟಾವು ಬೆಳ್ಳಿ ಕಿರಣ) ಜೀತಗಾರನು (ರಾಣಿಯ ಪ್ರೇಮ) ನನ್ನೆದೆ (ದೋಣಿಯ ಹಾಡು) ನಿನ್ನ (ನಿನ್ನ ಕಣ್ಣಿನ ಹಾಡು) ಈ ಭೂಮಿ, ಈ ಬಳ್ಳಿ (ಕೋರಿಕೆ) ಪುಟ್ಟಪ್ಪ (ಶ್ರೀಮಾನ್ ಪುಟ್ಟಪ್ಪನ ಹಾಡುಗಳು) ಗಾಡಿಯೊಂದು, ಸುಂದರಾಂಗ (ಗೌಳಗಿತ್ತಿಯ ಹಾಡು) ನಿನ್ನ ನೆನಪು ನನ್ನ (ಎಚ್ಚರ) ಕಪ್ಪು ಹುಡುಗ (ಕಪ್ಪು ಕಾಡಿನ ಹಾಡು)- ಹೀಗೆ ಈ ಉದಾಹರಣೆಯನ್ನೂ ಮುಂದುವರಿಸಬಹುದು. ಅಂದರೆ ಈ ಮಾದರಿಯ ಕವನಗಳಲ್ಲಿ ಕವಿಗೆ ಮತ್ತು ಸಮುದಾಯಕ್ಕೆ ಒಂದು ರೀತಿಯ ಸ್ಪಷ್ಟ ಅಂತರ ಕಾಣುತ್ತದೆ. ಮೊದಲ ಉದಾಹರಣೆಯ ಕವನಗಳು ಓದುಗರನ್ನು ಸಮೂಹದೊಂದಿಗೆ ಸಂವಾದ ಏರ್ಪಡುವಂತೆ ಪ್ರೇರೇಪಿಸಿದರೆ ಎರಡನೆಯ ಹಂತದ ಕವನಗಳು ಓದುಗರು ಆಂತರಿಕ ಸಂವಾದದಲ್ಲಿ ತೊಡಗುವಂತೆ ಪ್ರೇರೇಪಿಸುತ್ತವೆ. ಅಂದರೆ 'ಹೊಲೆಮಾದಿಗರ ಹಾಡು' ಸಂಕಲನದಲ್ಲಿ ಈ ರೀತಿಯ 'ಆತ್ಮಾರ್ಥಕ' ಪದ ಪ್ರಯೋಗಗಳು ಇಲ್ಲವೆಂದಲ್ಲ. ಉದಾಹರಣೆಗೆ 'ಒಂದು ಮೂಳೆಯ ಹಾಡು' (ನಾ ಮೂಳೆ, ನಾ ಇಂಗೆ ಇರಲ್ಲ) ನಾನ್ ಹ್ಯಣ, ನನ್ ಸುಟ್ಬುಡಿ (ಗಲ್ಲಗಳು) ನಾನು ನಿನ್ನ ತಬ್ಬುವೆ (ನನ್ನವಳಿಗೆ) ವಾದ ಬೆಳೆಸುವುದಕ್ಕೆ ಇಂತಹ ಪುರಾವೆಗಳನ್ನು ಬೆಳಸಬಹುದು. ಆದರೆ 'ಹೊಲೆಮಾದಿಗರ ಹಾಡು' ಸಂಕಲನದಲ್ಲಿ ಬರುವ ಈ ರೀತಿಯ ಆತ್ಮಾರ್ಥಕ ಪದ ಪ್ರಯೋಗಗಳಿಗೂ 'ಕಪ್ಪು ಕಾಡಿನ ಹಾಡು' ಸಂಕಲನದ ಆತ್ಮಾರ್ಥಕ ಪದಗಳಿಗೂ ಮೂಲಭೂತ ವ್ಯತ್ಯಾಸಗಳಿವೆ. ಮೊದಲ ಹಂತದ ಉದಾಹರಣೆಯಲ್ಲಿ ('ಹೊಲೆ ಮಾದಿಗರ ಹಾಡು') ಇಂತಹ ಪದ ಪ್ರಯೋಗವಾದಾಗಲೂ ಅವು 'ಪ್ರಬಲ' ವಾಗಿರುತ್ತವೆ. ಅವು ಪ್ರಯೋಗದ ದೃಷ್ಟಿಯಿಂದಷ್ಟೇ ಆತ್ಮಾರ್ಥಕವಾಗಿದ್ದರೂ ಕಾವ್ಯ ಶಕ್ತಿಯಿಂದಾಗಿ 'ಸಮೂಹದ ಶಕ್ತಿ'ಯನ್ನು ಪ್ರತಿಪಾದಿಸುತ್ತವೆ.

ಈ ಮಾತನ್ನು 'ಒಂದು ಮೂಳೆಯ ಹಾಡು' ಕವನದ ಮೂಲಕವೇ ಸ್ಪಷ್ಟೀಕರಿಸಬಹುದು.

..........................

..........................

..........................

ನನ್‌ಮ್ಯಾಲೆ ನಿಂತ್ಕಂಡ್ ತುಳೀತಿರೋ ಈ ಬಂಗ್ಲೆ
ಕ್ಯಳೀಕ್ ಬೀಳಂಗೆ
ಸೌದೆ ಸಿಗದಂಗ್ ಸಿಗಿತಿನಿ, ಸಾವ್ಕಾರಿ ಮಯ್ಯ
ಕಳ್ಳು ಪಚ್ಚಿ ಬಗಿತಿನಿ, ಕುಟ್ತಿನಿ

ಗಂಟ್ಮೊಳೆ ಕೊಬ್ಬು
ಕುಡಿತಿನಿ ಗಟಗಟನ, ತ್ಯಂಡ ಕುಡ್ದಂಗೆ
ಸಾವ್ಕಾರಿ ರಕ್ತನ
ನಾ ಮೂಳೆ, ನಾ ಇಂಗೆ ಇರಲ್ಲ
ಕೂಗ್ತಿನಿ, ಸಿಡಿತಿನಿ, ಮನುಷ ಆಯಿತಿನಿ.

ಆದರೆ ಎರಡನೆಯ ಹಂತದ ಉದಾಹರಣೆಯಲ್ಲಿಯ (ಕಪ್ಪು ಕಾಡಿನ ಹಾಡು) ಆತ್ಮಾರ್ಥಕ ಪದಗಳ ಕತೆ ಬೇರೆ. ಈಗ ಹೇಳಿದ ರೀತಿಯಲ್ಲಿಯೇ ಮುಂದುವರಿಯುವುದಾದರೆ ಅವು 'ದುರ್ಬಲ'. ಈ ಮಾತಿಗೂ ಬದ್ಧತೆಯ ಪ್ರಶ್ನೆಯಿರುವುದರಿಂದ ಕವನವನ್ನೇ ಉತ್ತರಿಸಲು ಕೇಳಿಕೊಂಡರಾಯಿತು. ಉದಾಹರಣೆಗೆ 'ದೋಣಿಯ ಹಾಡಿ' ನ ಈ ಭಾಗವನ್ನು ನೋಡಬಹುದು.

........................
........................
........................
ನೆಲದ ನಗೆಯನು ನುಂಗಿ
ಹಾವುಗಳ ಹರಿದಾಟ
ಮಳೆ ಪೊದರುಗಳ ತುಂಬ
ಗಾಢ ಮೌನ
ನೆತ್ತಿಯನು ಎತ್ತಿದರೆ
ಹತ್ತಿ ಉರಿಯುವ ಮುಗಿಲು
ನನ್ನೆದೆಯ ನದಿ ಬತ್ತಿ ಒಣಗಿ ಹೋಗಿತ್ತು
ಉರಿದ ಹೂ ಬಳ್ಳಿಗಳ
ಬೂದಿ ಸುರಿದಿತ್ತು.

ಇನ್ನೊಂದು ಉದಾಹರಣೆ ('ಕೋರಿಕೆ')
......................
......................
......................
ಜಲವಿಲ್ಲದ ಈ ಭೂಮಿಯ ಮೇಲೆ
ಸಾವು ಹಸಿವುಗಳೆ ಅಲೆಯದಿರಿ

ಬಲವಿಲ್ಲದ ಈ ಬಳ್ಳಿಯ ಮೇಲೆ
ಘೋರ ವೃಕ್ಷಗಳೆ ಎರಗದಿರಿ
....................................
ಪ್ರಾಣದ ಹರಣದ ಗಳಿಗೆಯ ಒಳಗೆ
ನೀಲಿ ತಾವರೆಯ ಅರಳದಿರಿ
ಎಲ್ಲೆಲ್ಲು ತುಂಬಿದ ನೋವಿನ ಒಳಗೆ
ಗುಲಾಬಿ ವನಗಳೆ ಸುಳಿಯದಿರಿ

'ಕಪ್ಪು ಕಾಡಿನ ಹಾಡು' ಸಂಕಲನದ ಕವನಗಳ ಇನ್ನೊಂದು ವೈಶಿಷ್ಟ್ಯವನ್ನೂ ಹೇಳುವುದರಿಂದ ಈಗಾಗಲೇ ಇಲ್ಲಿ ಪ್ರತಿಪಾದಿಸಿದ ವಿವರಗಳು ಇನ್ನಷ್ಟು ಬಲಗೊಳ್ಳುತ್ತವೆ. ಅದು ಈ ಕವನಗಳಲ್ಲಿ ಬಳಕೆಯಾಗುವ 'ಸಮೂಹ ವಾಚಕಪದ' ಗಳ ಅರ್ಥವಂತಿಕೆಗೆ ಸಂಬಂಧಿಸಿದುದು. ಈ ಸಂಕಲನದ ಅತ್ಯಂತ ಜನಪ್ರಿಯ ಕವನ 'ನಲವತ್ತೇಳರ ಸ್ವಾತಂತ್ರ್ಯ' ಕವನದಿಂದಲೇ ಈ ವಾಗ್ವಾದವನ್ನು ಆರಂಭಿಸಬಹುದು.

ಯಾರಿಗೆ ಬಂತು ಎಲ್ಲಿಗೆ ಬಂತು
ನಲವತ್ತೇಳರ ಸ್ವಾತಂತ್ರ್ಯ
ಟಾಟಾ ಬಿರ್ಲಾ ಜೇಬಿಗೆ ಬಂತು
ಜನಗಳ ತಿನ್ನುವ ಬಾಯಿಗೆ ಬಂತು
ನಲವತ್ತೇಳರ ಸ್ವಾತಂತ್ರ್ಯ

ಎಂದು ರಭಸದಿಂದ ಆರಂಭವಾಗುವ ಈ ಕವನ ಕೊನೆಯಾಗುವುದು-

ಪಾರ್ಲಿಮೆಂಟಿನ ಕುರ್ಚಿಯ ಮೇಲೆ
ವರ್ಷಗಟ್ಟಲೆ ಚರ್ಚೆಗೆ ಕೂತು
ಬಡವರ ಬೆವರ ರಕ್ತವ ಕುಡಿದು
ಏಳಲೆ ಇಲ್ಲ ಸ್ವಾತಂತ್ರ್ಯ
ನಲವತ್ತೇಳರ ಸ್ವಾತಂತ್ರ್ಯ

'ಗುಡಿಸಲುಗಳು ಗುಡುಗುತಿವೆ,' 'ಬಂಗಲೆಗಳು ನಡುಗುತಿವೆ,' ಎಲ್ಲಿದ್ದರೋ ಅವರು 'ಹೆಂಗಿದ್ದರೋ ' ಅವರು, 'ಎಚ್ಚೆತ್ತ ಸಿಂಹಗಳು ನನ್ನ ಜನರು' ಇತ್ಯಾದಿ 'ಸಮೂಹವಾಚಕಗಳು' ಮತ್ತು ಇಲ್ಲಿಯ ' ಸಮೂಹವಾಚಕಗಳು ಪರಸ್ಪರ ಒಂದೇ ಅಲ್ಲವೆಂಬುದು ಇದರಿಂದ ಸ್ಪಷ್ಟವಾಗುತ್ತದೆ.

ಹೀಗೆ ಸಿದ್ಧಲಿಂಗಯ್ಯನವರ ಕಾವ್ಯ ವಾಹಿನಿಯಲ್ಲಿ ಕಂಡುಬರುವ ಈ ಸ್ಥಿತ್ಯಂತರಕ್ಕೆ ಕೆಲವೊಂದು ಕಾರಣಗಳಿವೆ ಎಂದೆನಿಸುತ್ತದೆ. ಇದರಲ್ಲಿ ಮುಖ್ಯವಾದ ಕಾರಣವೆಂದು ನಾನು ಪರಿಗಣಿಸುವುದು ಅವರ ಕಾವ್ಯದ ಕುರಿತ ವಿಮರ್ಶೆಯನ್ನೇ. 'ಹೊಲೆಮಾದಿಗರ ಹಾಡು' ಪ್ರಕಟವಾದಾಗ ಅನೇಕ ಮಂದಿ ಅದು ' ಹೊಸ ಕಾವ್ಯ'ವೆಂದು ಕೊಂಡಾಡಿದರೂ ಅದರಲ್ಲಿ 'ಕಲಾತ್ಮಕತೆ' ಇಲ್ಲವೆಂದು ಬೊಟ್ಟಿಟ್ಟು ತೋರಿಸುತ್ತಲೇ ಬಂದರು. ಮುಂದೆ 'ಸಾವಿರಾರು ನದಿಗಳು' ಪ್ರಕಟವಾದಾಗ 'ಹೊಲೆಮಾದಿಗರ ಹಾಡು' ಕವನ ಸಂಕಲನದೊಂದಿಗೆ ಹೋಲಿಸಿ ಇದರ ಕಲಾತ್ಮಕತೆಯನ್ನು ಅಳೆಯ ತೊಡಗಿದರು. 'ಕಪ್ಪು ಕಾಡಿನ ಹಾಡು' ಪ್ರಕಟವಾದಾಗಲೂ ಆದದ್ದು ಹೀಗೆಯೇ.

ಇದಲ್ಲದೆ ಇನ್ನೊಂದು ದಿಸೆಯಲ್ಲಿಯೂ ಸಿದ್ಧಲಿಂಗಯ್ಯನವರ ಕಾವ್ಯದ ಮೇಲೆ ವಿಮರ್ಶೆಯ ಪರಿಣಾಮವಾಯಿತು. ಅಂದರೆ ಈ ಕವಿಯ ಬಗೆಗೆ ವಿಮರ್ಶೆಯೇ 'ಮೌನ' ತಾಳಿತು. ಸಿದ್ಧಲಿಂಗಯ್ಯನವರ ಕಾವ್ಯದ ಬಗೆಗೆ ಹೆಚ್ಚಿನ ಚರ್ಚೆ ನಡೆಯಲೇ ಇಲ್ಲ. ಕೆಲವೊಮ್ಮೆ ಬೀಸು ಹೇಳಿಕೆಗಳು, ಕಟು ಟೀಕೆಗಳನ್ನು ಹೊರತು ಪಡಿಸಿದರೆ ಒಬ್ಬ ಮುಖ್ಯ ಕವಿಯ ಕುರಿತು ಅಗತ್ಯ ಪ್ರಮಾಣದಲ್ಲಿ ಚರ್ಚೆಯಾಗದಿರುವುದೂ ಕಂಡು ಬರುತ್ತದೆ. ಈ ರೀತಿಯ 'ಮೌನ' ಏಕೆ ಉಂಟಾಗಿದೆ ಎಂಬ ಪ್ರಶ್ನೆ ಪ್ರತ್ಯೇಕ ಚರ್ಚೆಯಾದುದರಿಂದ ಕೇವಲ ಉಲ್ಲೇಖವನ್ನಷ್ಟೇ ಇಲ್ಲಿ ಮಾಡಿದ್ದೇನೆ.

ಸಿದ್ಧಲಿಂಗಯ್ಯರಂತಹ ಒಬ್ಬ ದಲಿತನ ಕಾವ್ಯದ ಮೂಲ ನೆಲೆ ನೋವು ಮತ್ತು ಸಿಟ್ಟುಗಳೇ. ಅದನ್ನು ಸಾಂಸ್ಕೃತಿಕವಾಗಿ ಹೇಳುವುದಿದ್ದರೆ ಸವರ್ಣೀಯರು ಈವರೆಗೆ ಕಾಪಾಡಿಕೊಂಡು ಬಂದ ಅಸಮಾನತೆಯೇ. ಹಾಗಾದುದರಿಂದ 'ಕಾವ್ಯಂ ಆನಂದಾಯ' ಎನ್ನುವುದು ದಲಿತ ಸಾಹಿತ್ಯಕ್ಕೆ 'ಅಲ್ಲದ' ವ್ಯಾಖ್ಯೆಯಾಗುತ್ತದೆ. ದಲಿತ ಸಾಹಿತ್ಯದ ಮುಖ್ಯವಾಗಿ ಸಿದ್ಧಲಿಂಗಯ್ಯನವರ ಕಾವ್ಯವನ್ನು 'ಕಾವ್ಯಂ ಆನಂದಾಯ' ಎನ್ನುವ ಮನೋಭಾವದಿಂದಲೇ ಗ್ರಹಿಸಲಾಯಿತು.

ಹೋರಾಟಕ್ಕಾಗಿ, ಬದುಕಿಗಾಗಿ 'ಹಾಡಿದ' ಕವನಗಳನ್ನು ವಿಮರ್ಶಿಸುವುದಕ್ಕೆ ತೊಡಗಿದಾಗಲೇ ಸಮಸ್ಯೆ ಎದುರಾದುದು. ಆದರೆ ಜಮೀನ್ದಾರರ ವಿರುದ್ಧ ಹೋರಾಡುವಾಗ, ಜಾತಿವಾದಿಗಳನ್ನು ಎದುರು ಹಾಕಿಕೊಳ್ಳುವಾಗ ಅವನ್ನು ಹಾಡುತ್ತಿದ್ದ ದಲಿತನಿಗೆ ಅಲ್ಲಿ 'ಕಲಾತ್ಮಕತೆ'ಯ ಸಮಸ್ಯೆಯೇ ಆಗಲಿಲ್ಲ. ಉದಾಹರಣೆಗಾಗಿ 'ಈ ಬಂದೂಕು ರಾಜ್ಯದಲಣ್ಣಾ, ನೀನು ಬಾಂಬಾಗಿ ಸಿಡಿಯ ಬೇಕಣ್ಣ' ಎನ್ನುವ ಗದ್ದರ್ ಕವಿಯ ಹಾಡನ್ನು 'ಪ್ರತಿಮೆ, ಧ್ವನಿ, ವ್ಯಂಗ್ಯ, ಸಂಕೇತ, ಶಿಲ್ಪ, ಬಂಧ'- ಎಂದು ವಿಮರ್ಶಿಸುವುದು ಬೇರೆ; ಜಮೀನ್ದಾರರ ವಿರುದ್ಧ, ಗೂಂಡಾಗಳ ವಿರುದ್ಧ ಹೋರಾಡುತ್ತ ಹಾಡುತ್ತಾ ಬಂದೂಕಿಗೆ ಎದೆಗೊಡುವುದು ಬೇರೆ. ಬಂದೂಕು ನಡುಗುವುದು ಕವನದ ಕಲಾತ್ಮಕತೆಯ ಸಾಲುಗಳಿಗಲ್ಲ. ಬದಲಾಗಿ ಅದನ್ನು ಹಾಡುತ್ತಾ ಎದೆಗೊಡುವ ಗುಂಡಿಗೆಗಳಿಗೆ! 'ಈ ಬಂದೂಕು ರಾಜ್ಯದಲ್ಲಣ್ಣ ನೀನು ಬಾಂಬಾಗಿ ಸಿಡಿಯ ಬೇಕಣ್ಣ' ಎನ್ನುವ ಸಾಲುಗಳಿಗೆ ವಿಮರ್ಶೆಯ ಲೆಕ್ಕಾಚಾರದಲ್ಲಿ ಕಲಾತ್ಮಕತೆ ಸಿದ್ಧಿಸಿರಬಹುದು, ಸಿದ್ಧಿಸಿಲ್ಲದಿರಬಹುದು. ಆದರೆ ಅದನ್ನು ಹಾಡುವ ಹೋರಾಟಗಾರನನ್ನು 'ಬಾಂಬಾಗಿ

ಸಿಡಿ'ಸುವ ಕ್ರಿಯೆಯೇ ಆ ಕವನಕ್ಕಿರುವ ಹೊಣೆಗಾರಿಕೆಯಾಗಿದೆ. ಸಿದ್ಧಲಿಂಗಯ್ಯನವರ ಕವನಗಳು ಕರ್ನಾಟಕದಾದ್ಯಂತ ದಲಿತ ಮತ್ತು ರೈತರ ಹೋರಾಟದ ಹಾಡುಗಳಾಗಿ ಪರಿವರ್ತಿತವಾಗುವ ಮೂಲಕ ಅಂಥ ಸಿಡಿಯುವ ಕ್ರಿಯೆಯನ್ನು ಅತ್ಯಂತ ಪರಿಣಾಮಕಾರಿಯಾಗಿ ವಿಮರ್ಶಿಸಿದರು. ಒಟ್ಟಿನಲ್ಲಿ ಕನ್ನಡ ಸಾಹಿತ್ಯ ಪರಂಪರೆಯಲ್ಲಿ 'ದಲಿತ ಸಾಹಿತ್ಯ' ಎನ್ನುವ ಸಾಹಿತ್ಯ ಪ್ರಕಾರವೊಂದು ತನ್ನ ಸ್ಪಷ್ಟವಾದ ಚಹರೆಗಳನ್ನು ಪಡೆದುಕೊಳ್ಳಲು ಸಿದ್ಧಲಿಂಗಯ್ಯ ಕಾರಣಕರ್ತರಾಗಿದ್ದಾರೆ. ಅವರನ್ನು ಹೊರತು ಪಡಿಸಿ ದಲಿತ ಸಾಹಿತ್ಯವನ್ನು ಚರ್ಚಿಸಲಾಗುವುದಿಲ್ಲ. ಅನೇಕ ಮೂಕ ಸಂವೇದನೆಗಳಿಗೆ ಮೊತ್ತ ಮೊದಲು ಸಿದ್ಧಲಿಂಗಯ್ಯನವರ ಕಾವ್ಯ ಬಾಯಿಕೊಟ್ಟಿತು. ಇಲ್ಲಿಂದ ಮುಂದೆ ದಲಿತ ಕಾವ್ಯ ಪರಂಪರೆಯೊಂದು ಕನ್ನಡ ಕಾವ್ಯವಾಹಿನಿಯೊಡನೆ ಭೋರ್ಗರೆಯತೊಡಗಿತು. ಹಾಗಾದುದರಿಂದ ಸಿದ್ಧಲಿಂಗಯ್ಯನವರ ಕಾವ್ಯದ ಚರ್ಚೆ ಅಂತಿಮವಾಗಿ ದಲಿತ ಸಾಹಿತ್ಯದ ಜತೆಜತೆಗೆ ಕನ್ನಡ ಸಾಹಿತ್ಯ ಪರಂಪರೆಯ ಚರ್ಚೆಯೂ ಆಗುತ್ತದೆ. ಅದರೊಂದಿಗೆ ಸಮಕಾಲೀನ ರಾಜಕೀಯ, ಸಾಂಸ್ಕೃತಿಕ, ಸಾಮಾಜಿಕ ಮುಖಾಮುಖಿಯೂ ಆಗುತ್ತದೆ. ಆಗ ಬೇಕಾಗಿದೆ!

# ಅನುಬಂಧ

## ಸಿದ್ಧಲಿಂಗಯ್ಯನವರ ಕೃತಿಗಳು

**ಕಾವ್ಯ:**

೧. ಹೊಲೆಮಾದಿಗರ ಹಾಡು ೧೯೭೫

೨. ಸಾವಿರಾರು ನದಿಗಳು ೧೯೭೯

೩. ಕಪ್ಪು ಕಾಡಿನ ಹಾಡು ೧೯೮೨

**ನಾಟಕ:**

೧. ಪಂಚಮ ಮತ್ತು ನೆಲಸಮ ೧೯೮೦

೨. ಏಕಲವ್ಯ ೧೯೮೪

**ಪ್ರಬಂಧ:**

೧. ಅವತಾರಗಳು ೧೯೯೧

**ವಿಮರ್ಶೆ:**

೧. ಹಕ್ಕಿನೋಟ ೧೯೯೧

**ಸಂಪಾದನೆ:**

ಸಮಕಾಲೀನ ಕನ್ನಡ ಕವಿತೆ ೩ ಮತ್ತು ೪

**ಪಡೆದ ಪ್ರಶಸ್ತಿಗಳು**

೧. ಕರ್ನಾಟಕ ಸರಕಾರದ ಅತ್ಯುತ್ತಮ ಚಲನಚಿತ್ರ ಗೀತ ರಚನಕಾರ ಪ್ರಶಸ್ತಿ ೧೯೮೪

೨. ಕರ್ನಾಟಕ ಸರಕಾರದ ಕನ್ನಡ ರಾಜ್ಯೋತ್ಸವ ಪ್ರಶಸ್ತಿ ೧೯೮೬

೩. ಕರ್ನಾಟಕ ಸರಕಾರದ ಅಂಬೇಡ್ಕರ್ ಶತಮಾನೋತ್ಸವ ವಿಶೇಷ ಪ್ರಶಸ್ತಿ ೧೯೯೨

## ಪೂರಕ ಓದಿಗೆ


ಆರ್ಕೆ ಮಣಿಪಾಲ, (೧೯೮೪), ವಾಸ್ತವ. ಹಗರಿಬೊಮ್ಮನಹಳ್ಳಿ, ಯುವಕರ ಸಂಘ, ರಾಮನಗರ

ಅರವಿಂದ ಮಾಲಗತ್ತಿ, (೧೯೮೮) ದಲಿತ ಸಾಹಿತ್ಯ ಚಳುವಳಿಯ ತಾತ್ವಿಕ ಚಿಂತನ, ಬೆಂಗಳೂರು: ಹೊಸದಿಕ್ಕು ಪ್ರಕಾಶನ

ಅನಂತಮೂರ್ತಿ ಯು. ಆರ್., ದಲಿತರು ಮತ್ತು ಸಾಹಿತ್ಯ (ಲೇ), ಪೂರ್ವಾಪರ

ಚಂದ್ರಶೇಖರ ಪಾಟೀಲ (ಸಂ), (೧೯೯೩), ಸಂಕ್ರಮಣ ಸಾಹಿತ್ಯ: ಸಂಪುಟ ಎರಡು, ಧಾರವಾಡ ಸಂಕ್ರಮಣ ಪ್ರಕಾಶನ

ದೇವಯ್ಯ ಹರವೆ, (೧೯೯೧) ದಲಿತ ಸಾಹಿತ್ಯ: ಕೆಲವು ತಾತ್ವಿಕ ಚಿಂತನೆಗಳು, (ಲೇ), ದಲಿತ ಸಾಹಿತ್ಯ ಮತ್ತು ಇತರ ಲೇಖನಗಳು. ಬೆಂಗಳೂರು: ಕನ್ನಡ ಮತ್ತು ಸಂಸ್ಕೃತಿ ಇಲಾಖೆ

ದೊಡ್ಡಹುಲ್ಲೂರು ರುಕ್ಕೋಜಿರಾವ್, (೧೯೮೫), ಸಾವಿರಾರು ನದಿಗಳು: ದಶಾಂಶದಿಂದ ಶತಾಂಶ ಸಿದ್ಧಯತ್ತ(ಲೇ), ಕಮಲಾಭಿನಂದನ, ಬೆಂಗಳೂರು, ಕಮಲಾ ಹಂಪನಾ ಅಭಿನಂದನ ಸಮಿತಿ

ನಾಗಭೂಷಣ, ಡಿ. ಎಸ್., (೧೯೯೦) ಕಳೆದ ದಶಕದ ಕನ್ನಡ ಕಾವ್ಯ: ಒಂದು ನೋಟ (ಲೇ), ಗಮನ. ಚಿತ್ರದುರ್ಗ: ಸಂವಾದ ಪ್ರಕಾಶನ, ಮಲ್ಲಾಡಿಹಳ್ಳಿ.

ಪುರುಷೋತ್ತಮ ಬಿಳಿಮಲೆ, (೧೯೯೨), ಬಂಡಾಯ- ದಲಿತ ಸಾಹಿತ್ಯ, ಬೆಂಗಳೂರು: ಕರ್ನಾಟಕ ಸಾಹಿತ್ಯ ಅಕಾಡೆಮಿ

ಪೋಲಂಕಿ ರಾಮಮೂರ್ತಿ, (೧೯೮೪), ದಲಿತ ಸಾಹಿತ್ಯ: ಸಿಟ್ಟಿಗೆ ಹಕ್ಕಿದೆ (ಲೇ), ಸಂಕ್ರಮಣ: ೧೮೬, ಧಾರವಾಡ : ಸಂಕ್ರಮಣ ಪ್ರಕಾಶನ

ಬಸವರಾಜ ಸಬರದ (ಸಂ), (೧೯೯೨), ಬಂಡಾಯ ಸಾಹಿತ್ಯದ ತಾತ್ವಿಕ ನೆಲೆಗಳು. ಬೆಂಗಳೂರು: ಕನ್ನಡ ಸಾಹಿತ್ಯ ಪರಿಷತ್ತು

ಮರುಳಸಿದ್ಧಪ್ಪ . ಕೆ. ೧೯೮೬ ಕನ್ನಡ ನಾಟಕ ಸಮೀಕ್ಷೆ, ಬೆಂಗಳೂರು : ಪ್ರತಿಮಾ ನಾಟಕ ಪ್ರಕಾಶನ, ಯಶವಂತ ನಗರ.

ಶಿವರುದ್ರಪ್ಪ . ಜಿ. ಎಸ್ (೧೯೯೪) ದಲಿತ ಸಾಹಿತ್ಯ: ಒಂದು ವಿವೇಚನೆ (ಲೇ), ಸಮಗ್ರ ಗದ್ಯ ಸಂಪುಟ - ೨ ಬೆಂಗಳೂರು: ಸ್ನೇಹಪ್ರಕಾಶನ, ವಿಜಯನಗರ

ಶಿವರುದ್ರಪ್ಪ ಜಿ. ಎಸ್. (ಸಂ), (೧೯೭೭), ಸಾಹಿತ್ಯ ವಾರ್ಷಿಕ, ಪ್ರಸಾರಾಂಗ, ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು

ಶಿವರುದ್ರಪ್ಪ ಜಿ. ಎಸ್. (ಸಂ), (೧೯೭೯) ಸಾಹಿತ್ಯ ವಾರ್ಷಿಕ. ಪ್ರಸಾರಾಂಗ, ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು

ಶಿವರುದ್ರಪ್ಪ ಜಿ. ಎಸ್. (ಸಂ), (೧೯೮೩) ಸಾಹಿತ್ಯ ವಾರ್ಷಿಕ. ಪ್ರಸಾರಾಂಗ, ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು

ಸಿದ್ಧಾಶ್ರಮ ಸಿ. ಪಿ, (೧೯೭೮), ಕನ್ನಡ ಕಾವ್ಯಕ್ಕೆ ಹೊಸ ತಿರುವು. ಹೊಲೆಮಾದಿಗರ ಹಾಡು (ಲೇ), ಹೊಸಅಲೆ, ಮೈಸೂರು: ಆನಂದ ಪ್ರಕಾಶನ

ಸಿದ್ಧಲಿಂಗಯ್ಯ, (೧೯೯೫), ಬಾಲ್ಯಕಾಲ, (ಲೇ), ರುಜುವಾತು ೩೮, [ಸಂ.ಯು.ಆರ್. ಅನಂತಮೂರ್ತಿ] ಹೆಗ್ಗೋಡು : ಕವಿಕಾವ್ಯ.

D.R. Nagaraj, From political Rage to Cultural AFFIRMATION (Notes on the Kannada Dalit poet-Activist Siddalingaiah) India International centre QUARTERLY (Vol.21, No.4, Winter 1994)

ಹಂಪಿಯ ಕನ್ನಡ ವಿಶ್ವವಿದ್ಯಾಲಯ ವಿದ್ಯೆಯನ್ನು ಕಲಿಯಲು ಅನುವು ಮಾಡಿಕೊಡುವ ಒಂದು ಸಂಸ್ಥೆಯೇ ಹೊರತು ಅದು ವಿದ್ಯೆಯನ್ನು ಕಲಿಸುವ ಸಂಸ್ಥೆಯಲ್ಲ. ನಮ್ಮ ನಾಡಿನಲ್ಲಿ ಹಳೆಯ ಕಾಲದ ತಿಳುವಳಿಕೆಯೊಂದಿದೆ. ಅಲ್ಲದೆ ಪಶ್ಚಿಮದಿಂದ ಹರಿದು ಬರುತ್ತಿರುವ ಜ್ಞಾನ ಪ್ರವಾಹವೂ ಇದೆ. ಈ ಎರಡೂ ತಿಳುವಳಿಕೆಗಳು ಒಂದಕ್ಕೊಂದು ಸಂಧಿಸಿ ಬೆಳಕನ್ನು ಉಂಟುಮಾಡಿವೆ. ಜೊತೆಗೆ ದಿಗ್ಭ್ರಮೆಯನ್ನೂ ತಂದಿವೆ. ಈ ತಿಳುವಳಿಕೆಗಳ ವಿವೇಕದ ವಿನಿಯೋಗ ಇಂದು ಅಗತ್ಯವಾಗಿದೆ. ಇಂಥ ವಿನಿಯೋಗಕ್ಕಾಗಿ ಹೊಸ ಬಗೆಯ ಶಾಸ್ತ್ರ ವಿಧಾನಗಳು ನಮಗಿಂದು ಬೇಕಾಗಿವೆ. ಕನ್ನಡ ವಿಶ್ವವಿದ್ಯಾಲಯದಲ್ಲಿ ನಡೆಯುತ್ತಿರುವ ಸಂಶೋಧನೆಯ ಗುರಿಯೆಂದರೆ ಈ ಶಾಸ್ತ್ರ ವಿಧಾನಗಳ ನಿರ್ಮಾಣ.

ನಾವು ನಮ್ಮ ನಮ್ಮಲ್ಲಿ ವಿಚಾರ ವಿನಿಮಯ ನಡೆಸಲು, ಒಬ್ಬರ ಅರಿವನ್ನು ಎಲ್ಲರೂ ಹಂಚಿಕೊಳ್ಳಲು ವಿಶ್ವವಿದ್ಯಾಲಯದಲ್ಲಿ ಪ್ರತಿವಾರ ಮಂಟಪ ಎಂಬ ಕಾರ್ಯಕ್ರಮ ನಡೆಸುತ್ತೇವೆ. ಅಲ್ಲಿ ಹೊಮ್ಮಿದ ವಿಚಾರಗಳು ನಮ್ಮ ಅರಿವನ್ನು ಹೆಚ್ಚಿಸಿದಂತೆ ನಿಮಗೂ ಲಾಭದಾಯಕವಾಗುವವೆಂಬ ನಂಬಿಕೆಯಿಂದ ಪುಸ್ತಿಕೆಗಳ ರೂಪದಲ್ಲಿ ಅವನ್ನು ಪ್ರಕಟಿಸಿ ನಿಮ್ಮ ಕೈಗಿಡುತ್ತಿದ್ದೇವೆ.

**ಚಂದ್ರಶೇಖರ ಕಂಬಾರ**
ಕುಲಪತಿಗಳು